# Founders & Reformers of Religion in India.

BY

R. H. DESÁPÂNDE, M. A.
*Fellow of the University of Bombay &c.*

# ಭರತಖಂಡದ ಧರ್ಮಸ್ಥಾಪಕರೂ ಧರ್ಮಸುಧಾರಕರೂ.

ಮುಂಬಯಿಯ ವಿಶ್ವವಿದ್ಯಾಲಯದ ಫೆಲೊ ಆದ
ರಾಮಚಂದ್ರ ಹಣಮಂತ ದೇಶಪಾಂಡೆ ಎಮ್. ಎ.
ಇವರು ಬರೆದುದು.

ಮೊದಲನೆಯಾವೃತ್ತಿ.



ಧಾರವಾಡ,-೧೮೯೬.

# DEDICATED

(BY PERMISSION)

TO

**R. S. Balavant Râmachandra Sahasrabudhe, B. A.**

Honorary Member Karnâtaka Vidyâvardhaka Sangha,
Fellow of the University of Bombay & Educational Inspector, S. D.

**OUT OF DEEP REGARD**

For the interest he takes in the welfare of the Kannada people
and their language.



ಈ ಪುಸ್ತಕವು,

ಕರ್ನಾಟಕ ವಿದ್ಯಾವರ್ಧಕ-ಸಂಘದ ಬಹುಮಾನಿತಸಭಾಸದರೂ

ಮುಂಬಯಿ ವಿಶ್ವವಿದ್ಯಾಲಯದ ಫೆಲೊಗಳೂ

ದಕ್ಷಿಣಭಾಗದ ಎಜ್ಯುಕೇಶನಲ್ ಇನಸ್ಪೆಕ್ಟರರೂ ಆದ

ರಾ. ಸಾ. ಬಳವಂತ ರಾಮಚಂದ್ರ ಸಹಸ್ರಬುದ್ಧೆ ಬೀ. ಎ.

ಇವರಿಗೆ,

ಕನ್ನಡಿಗರ ಹಿತವನ್ನೂ ಕನ್ನಡನುಡಿಯ ಬೆಳವಣಿಗೆಯನ್ನೂ

ಮಾಡುವ ಇವರ ಇಚ್ಛೆಯನ್ನು ನೋಡಿ,

ಕೃತಜ್ಞತೆಯಿಂದ

ಕಾಣಿಕೆಯಾಗಿ ಅರ್ಪಿಸಲ್ಪಟ್ಟಿರುತ್ತದೆ.

# PREFACE.



This little book lays claim neither to originality nor to completensss. It merely narrates briefly the principal facts of the lives aed religious principles of the most eminent philosophers that this Bharata-Khanda or the continent of India has given birth to. Of the ten personages whose lives are given in the following pages Gautama Budha, Shankarâchârya, Râmânujâchârya, Madhvâchârya and Vallabhâchârya established independent schools of philosophy and religious doctrines. Others such as Basava, Chaitanya and Kabir were more or less devotees worshiping one of the deities of the Hindu Trinity.

The plan of the book requires but little explanation. Most of the works consulted have been mentioned in footnotes. The positions of important places have also been described there. Of the six pictures inserted in this book those of Shankarâchârya, Râmânujâchârya, and Kabir have been newly designed and others have been drawn from pictures already published. In connection with these, I have to thank Messrs Manerikar and Gudi for their kind advice and help.

I have also to thank heartily R. S. Balvant Ramchandra Sahasrabudhe B. A. Educational Inspector, Southern Division, for having kindly accepted the dedication of this book.

In conclusion I beg to request my readers to kindly favour me with their suggestions for the improvement of the book.

Kâmankatti, Dhârwâd,
24th April 1896.

*R. H. D.*

## ವಿಷಯಗಳ ಪರಿವಿಡಿ.




Printed at the Karnataka B. D. Press,—Dharwad.




# ೧. ಗೌತಮಬುದ್ಧ.

ಈ ಜಗತ್ತಿನಲ್ಲಿ ಎಲ್ಲ ಧರ್ಮಗಳಿಗಿಂತ ಹೆಚ್ಚು ವಿಸ್ತಾರವಾಗಿ ಹಬ್ಬುಗೊಂಡ ಧರ್ಮವೇ ಬೌದ್ಧಧರ್ಮವು. ಈಧರ್ಮವನ್ನು ಅನುಸರಿಸುವ ಜನರ ಸಂಖ್ಯೆಯಷ್ಟು ಸಂಖ್ಯೆಯು ಬೇರೆ ಯಾವ ಧರ್ಮದಲ್ಲಿಯೂ ಇಲ್ಲ.† ಇದಲ್ಲದೆ ಈಧರ್ಮವು ವೇದಧರ್ಮದ

---

† ಈಜಗತ್ತಿನಲ್ಲಿ ಒಂದೂಕಾಲು ಅಬ್ಜ ಜನರಿರುತ್ತಾರೆಂದೆಣಿಸಿದರೆ, ಬೇರೆ ಬೇರೆ ಧರ್ಮದವರ ಸಂಖ್ಯೆಯು ಕೆಳಗೆ ಬರೆದಂತೆ ಹೊರಡುತ್ತದೆ:-

ಹೊರತು ಉಳಿದೆಲ್ಲ ಧರ್ಮಗಳಿಗಿಂತ ಬಹುಪುರಾತನಧರ್ಮವೆನ್ನಲಿಕ್ಕೇನೂ ಅಡ್ಡಿಯಿಲ್ಲ. ಇಂತಹ ಹೆಸರಾದ ಧರ್ಮವನ್ನು ಈಗ ಸುಮಾರು ೨೩ ಸಾವಿರ ವರ್ಷಗಳ ಹಿಂದೆ ಸ್ಥಾಪಿಸಿದ ಮಹಾಪುರುಷನೇ **ಗೌತಮನು.** * ಇವನ ಚರಿತ್ರದ ಸಂಬಂಧದಿಂದ ನಮಗೆ ಗೊತ್ತಿದ್ದ ಸಂಗತಿಗಳಾವವೆಂದರೆ:–

ಪೂರ್ವಕಾಲದಲ್ಲಿ **ಕಾಶಿಯ** ಈಶಾನ್ಯಕ್ಕೆ ೧೦೦ ಮೈಲುಗಳ ಮೇಲೆ **ರೋಹಿಣಿಯೆಂಬ** ಹೊಳೆಯ ದಂಡೆಯಲ್ಲಿ **ಕಪಿಲವಸ್ತು**ವೆಂಬ ಗ್ರಾಮವಿತ್ತು. † ಅಲ್ಲಿ ಕ್ರಿಸ್ತಶಕದ ಮುಂಚೆ ಆರನೆಯ ಶತ

| ಹೆಸರು. | ಸಂಖ್ಯೆ | ೧೦೦ಕ್ಕೆ ಪ್ರಮಾಣ. |
|---|---|---|
| ಪಾರ್ಸಿಕರು | ೧,೫೦,೦೦೦ | ಶಿರತುಸು. |
| ಸೀಕರು | ೧೨,೦೦,೦೦೦ | |
| ಯಹುದಿಯರು | ೭೦,೦೦,೦೦೦ | ೧/೨ |
| ಗ್ರೀಕ್ ಕ್ಯಾಥೊಲಿಕರು | ೭,೫೦,೦೦,೦೦೦ | ೬ |
| ರೋಮನ್ ಕ್ಯಾಥೊಲಿಕರು | ೧೫,೨೦,೦೦,೦೦೦ | ೧೨ |
| ಉಳಿದ ಕ್ರಿಸ್ತರು | ೧೦,೦೦,೦೦,೦೦೦ | ೮ |
| ಹಿಂದೂಜನರು | ೧೬,೦೦,೦೦,೦೦೦ | ೧೩ |
| ಮುಸಲ್ಮಾನರು | ೧೯,೫೦,೦೦,೦೦೦ | ೧೫ |
| ಬೌದ್ಧರು | ೫೦,೦೦,೦೦,೦೦೦ | ೪೦ |
| ಉಳಿದ ಸಣ್ಣ ಪುಟ್ಟ ಧರ್ಮದವರು | ೧೦,೦೦,೦೦,೦೦೦ | ೮ |
| ಒಟ್ಟು | ೧,೨೮,೪೦,೫೦,೦೦೦ | |

ಡೇವಿಡ್ಸನ ಬೌದ್ಧಮತ.

* ಪೂರ್ವಕಾಲದಲ್ಲಿ ಗೌತಮನೆಂಬ ಹೆಸರಿನವರು ಮೂರುಮಂದಿ ಪ್ರಸಿದ್ಧಪುರುಷರಾದರು. ಧರ್ಮಶಾಸ್ತ್ರಕರ್ತನಾದ ಗೌತಮನೂ ನಯ್ಯಾಯಿಕನಾದ ಗೌತಮನೂ ಈ ಬೌದ್ಧಧರ್ಮಸ್ಥಾಪಕನಾದ ಗೌತಮನಿಂದ ಭಿನ್ನರಾಗಿರುತ್ತಾರೆ.

† ಇದಕ್ಕೆ ಈಗ ಕೋಹಾಣವೆನ್ನುತ್ತಾರೆಂದು ಡೇವಿಡ್ಸನು ಬರೆಯುತ್ತಾನೆ. ಆದರೆ ಜನರಲ್ ಕನಿಂಗ್ಹಾಮ ಸಾಹೇಬರು ಈಯೆಡೆಯಲ್ಲಿ ಈಗ ವಾಯುವ್ಯಪ್ರಾಂತದೊಳಗೆ ಗೋರಖಪುರ ಜಿಲ್ಲೆಯಲ್ಲಿದ್ದ ನಗರಖಸವೆಂಬ ಹಳ್ಳಿ ಇರುತ್ತದೆಂದು ತರ್ಕಿಸುತ್ತಾರೆ.

ಕದಲ್ಲಿ ಶಾಕ್ಯಕುಲದವನಾದ **ಶುದ್ಧೋದನ**ನೆಂಬ ಅರಸನು ಆಳುತ್ತಿದ್ದನು. ಅವನಿಗೆ **ಪ್ರಜಾವತೀ**–**ಮಾಯೆ**ಯೆಂಬ ಇಬ್ಬರು ಅಕ್ಕತಂಗಿಯರು ಹೆಂಡರಾಗಿದ್ದರು. ಶುದ್ಧೋದನನಿಗೆ ಬಹುದಿವಸಗಳವರೆಗೆ ಗಂಡುಮಕ್ಕಳಾಗಲಿಲ್ಲ. ಆದ್ದರಿಂದ ಅವನು ಅದೇ ಚಿಂತೆಯಲ್ಲಿರುವಾಗ ಮಾಯೆಯು ತನ್ನ ೪೫ ನೆಯ ವಯಸ್ಸಿನಲ್ಲಿ ಬಸುರಾಗಿ ಒಂಬತ್ತು ತಿಂಗಳು ತುಂಬಿದ ಬಳಿಕ, ನೆರೆಯಲಿದ್ದ ತನ್ನ ತವರ್ಮನೆಗೆ ಹಡೆಯಲಿಕ್ಕೆ ಹೋಗುವಾಗ ಹಾದಿಯೊಳಗೆ **ಲುಂಬಿಣಿ**ಯೆಂಬ ಬನದಲ್ಲಿ ಒಂದು ಗಂಡುಮಗುವನ್ನು ಹೆತ್ತಳು (ಕ್ರಿ. ಪೂ. ೫೫೭). ಆಗ ಸಂಗಡಲಿದ್ದವರು ಆಕೂಸುಬಾಣತಿಯರನ್ನು ಜತನದಿಂದ **ಕಪಿಲವಸ್ತು**ವಿಗೆ ತಿರುಗಿ ತಂದರು. ಮುಂದೆ ೭ ನೆಯ ದಿವಸ ಬಾಣತಿಯು ಮಾಯುವಾಗಿ ಸತ್ತುದರಿಂದ, ಆಕೆಯ ಸವತಿಯಾದ ಪ್ರಜಾವತಿಯು ಆಕೂಸನ್ನು ಬಹುಶ್ರಮದಿಂದ ಜೋಕೆಮಾಡಿದಳು. ಈಮಗುವೇ ಮುಂದೆ ಹೆಸರಾದ **ಸಿದ್ಧಾರ್ಥ**ನು, ಅಥವಾ **ಗೌತಮಬುದ್ಧ**ನು.

**ಗೌತಮ**ನು ಚಿಕ್ಕಂದಿನಲ್ಲಿ ಆಟಸೋಟಗಳಲ್ಲಿ ಕಾಲಕಳೆಯದೆ, ಮನುಷ್ಯನ ಸ್ಥಿತಿಗತಿಯ ಬಗ್ಗೆ ವಿಚಾರಮಾಡುತ್ತಿದ್ದನು. ಅವನು ೧೯ ನೆಯ ವಯಸ್ಸಿನಲ್ಲಿ ತನ್ನ ಸೋದರತ್ತೆಯ ಮಗಳಾದ **ಯಶೋಧರೆ** ಎಂಬಾಕೆಯನ್ನು ಮದುವೆಯಾದನು. ಬಳಿಕ ಅವನು ಒಂದು ದಿವಸ ತಾನು ಕಲಿಯದಿದ್ದ ರಾಜವಿದ್ಯಗಳನ್ನು ತೋರಿಸಿ, ಜನರನ್ನು ಅಚ್ಚರಿಗೊಳಿಸಿದನೆಂದು ಹೇಳುತ್ತಾರೆ.

ಮದುವೆಯಾದ ೧೦ ವರ್ಷಕ್ಕೆ ಅವನಿಗೆ **ರಾಹುಲ**ನೆಂಬ ಒಬ್ಬ ಮಗನು ಹುಟ್ಟಿದನು. ಮುಂದೆ ತಾನು ಸಂಸಾರದ ಬಲೆಯಲ್ಲಿ ಸಿಗುವೆನೆಂಬ ಹೆದರಿಕೆಯಿಂದ **ಗೌತಮ**ನು ಅದೇ ದಿವಸ ನಟ್ಟಿರುಳಿನಲ್ಲಿ ಮಗನನ್ನು ಮುದ್ದಾಡಬೇಕೆಂಬ ಬಯಕೆಯನ್ನು ಹತ್ತಿಕ್ಕಿಟ್ಟು, ತನ್ನ ಸಾರಥಿಯಾದ **ಚನ್ನ**ನನ್ನು ಸಂಗಡ ಕರಕೊಂಡು, ನಡುವೆ ಎಲ್ಲಿಯೂ ನಿಲ್ಲದೆ, **ಅನೋಮಾ** ಹೊಳೆಯ ದಂಡೆಯ ವರೆಗೆ ಹೋದನು. ಅಲ್ಲಿ ತನ್ನ ಒಡವೆಗಳನ್ನೂ ಉಡಿಗೆತೊಡಿಗೆಗಳನ್ನೂ ಕುದುರೆಯನ್ನೂ ತನ್ನ ತಂದೆಗೆ ಒಪ್ಪಿಸಬೇಕೆಂದು **ಚನ್ನ**ನ ಕಯ್ಯಲ್ಲಿತ್ತು, ತಾನೊಬ್ಬನೇ ಜೋಗಿಯ ವೇಷವನ್ನು ಧರಿಸಿ, **ಮಗಧ**ದೇಶದ

ರಾಜಧಾನಿಯಾದ ರಾಜಗೃಹವೆಂಬ* ಪಟ್ಟಣಕ್ಕೆ ಹೋದನು( ಕ್ರಿ. ಪೂ. ಮು. ೫೨೮ ); ಅಲ್ಲಿ ಅಲಾರ, ಉದ್ರಕ ಮೊದಲಾದ ಬ್ರಾಹ್ಮಣರ ಶಿಷ್ಯನಾಗಿ, ಅವರಿಂದ ಉಪದೇಶಹೊಂದಿ, ಗಯೆಯ ನೆರೆಯಲ್ಲಿದ್ದ ಉರುವೆಳ ಗುಡ್ಡದಲ್ಲಿ ತಪಶ್ಚರ್ಯವಾಡ ತೊಡಗಿದನು. ಆಗ ಅವನ ಹತ್ತರ ಅಯ್ದುಮಂದಿ ಶಿಷ್ಯರಿದ್ದರು. ಈಮೇರೆಗೆ ಅವನು ಆರುವರ್ಷಗಳ ವರೆಗೆ ಕಠಿಣತಪಸ್ಸನ್ನು ಮಾಡಿ, ಅದರಿಂದ ಏನೂ ಫಲವಿಲ್ಲೆಂದು ಮನಗಂಡು, ಅದನ್ನು ಬಿಟ್ಟು ಕೊಟ್ಟನು. ಇದನ್ನು ನೋಡಿ, ಅವನ ಶಿಷ್ಯರು ಅವನನ್ನು ತೊರೆದು, ಕಾಶಿಗೆ ಹೊರಟು ಹೋದರು. ಬಳಿಕ ಒಂದು ದಿವಸ ಅವನು ಒಂದು ಅರಳೆಯ ಮರದ ಕೆಳಗೆ ಕುಳಿತು ವಿಚಾರಮಾಡುವಾಗ ಅವನಿಗೆ ಹೊಳೆದುದೇನಂದರೆ:–† (೧) ತಪಸ್ಸಿನಿಂದ ಮುಕ್ತಿ ದೊರೆಯುವದೆಂಬ ಮಾತು ಸುಳ್ಳು, (೨) ಬಂಧುಪ್ರೀತಿ, ಪರೋಪಕಾರಗುಣ ಇವೇ ಮುಕ್ತಿಯ ಮುಖ್ಯಸಾಧನಗಳು.

---

* ರಾಜಗೃಹವು ಬಂಗಾಲಿಲಾಖೆಯೊಳಗೆ ಪಾಟಣಾಜಿಲ್ಲೆಯಲ್ಲಿ ಒಂದು ಹಾಳಾದ ಊರು ಇರುತ್ತದೆ. ಜರಾಸಿಂಧುವಿನ ರಾಜಧಾನಿಯಾದ ಗಿರಿವ್ರಾಜವು ಇದೇ ಇರಬಹುದೆಂದು ಶೋಧಕರು ತರ್ಕಿಸುತ್ತಾರೆ. ಇದರ ಸುತ್ತಲೂ ೫ ಮರಡಿಗಳಿರುತ್ತವೆ. ಅಲ್ಲಿ ಹೊಸ ಊರಾದ ರಾಜಗಿರವು ಇದಕ್ಕೆ ಹತ್ತಿರುತ್ತದೆ.

† ಈವೃತ್ತಿನಿಂದ ಗೌತಮನಿಗೆ ಬುದ್ಧನೆಂಬ ಹೆಸರು ಬಂತು ಬೌದ್ಧರು ೭ ಮಂದಿ ಬುದ್ಧರು ಆಗಿ ಹೋದರೆಂದು ಹೇಳುತ್ತಾರೆ ಅವರ್ಯಾರೆಂದರೆ:–

| ಹೆಸರುಗಳು | ಇದ್ದ ಕಾಲ. |
|---|---|
| ವಿಪಶ್ರೀ | ೮೦,೦೦೦ ವರ್ಷ |
| ಶಿಖೀ | ೭೦,೦೦೦ ,, |
| ವಿಶ್ವಭೂ | ೬೦,೦೦೦ ,, |
| ಕ್ರಕುಚ್ಛಂದ | ೪೦,೦೦೦ ,, |
| ಕನಕ | ೩೦,೦೦೦ ,, |
| ಕಾಶ್ಯಪ | ೨೦,೦೦೦ ,, |
| ಶಾಕ್ಯ (ಗೌತಮ) | ೧೦೦ ,, |

ಬಳಿಕ **ಗೌತಮನು** ತಾನು ಇಷ್ಟು ಶ್ರಮದಿಂದ ಹುಡುಕಿ ತೆಗೆದ ತತ್ವಗಳನ್ನು ತನ್ನ ಮೊದಲಿನ ಗುರುಗಳಾದ **ಅಲಾರ-ಉದ್ರಕರಿಗೆ** ತಿಳಿಸಬೇಕೆಂದು **ರಾಜಗೃಹಕ್ಕೆ** ಹೋದನು. ಆದರೆ ಅವರು ಆಗ ಸ್ವರ್ಗಸ್ಥರಾಗಿದ್ದರು. ಆದ್ದರಿಂದ ಅವನು ಅಲ್ಲಿಂದ **ಕಾಶಿಗೆ** ಹೋಗಿ ಅಲ್ಲಿ ತನ್ನ ಮೊದಲಿನ ಶಿಷ್ಯರಾದ **ಕೌಡಣ್ಯ** ಮುಂತಾದವರಿಗೂ ಉಳಿದ ಜನರಿಗೂ ತನ್ನ ಹೊಸಧರ್ಮದ ತತ್ವಗಳನ್ನು ಉಪದೇಶ ಮಾಡಲಾರಂಭಿಸಿದನು (ಕ್ರಿ. ಪು. ೫೨೨). **ವ್ಯಾಸನೆಂಬವನು** ಅವನ ಮೊದಲನೆಯ ಶಿಷ್ಯನಾದನು; ಬಳಿಕ **ವ್ಯಾಸನ** ತಂದೆ, ತಾಯಿ, ಹೆಂಡತಿ ಮುಂತಾದವರು ಈಹೊಸ ಮತಕ್ಕೆ ಸೇರಿದರು. ಮುಂದೆ ೩ ತಿಂಗಳಲ್ಲಿ ಗಂಡಸರೂ ಹೆಂಗಸರೂ ಕೂಡಿ ಒಟ್ಟು ೬೦ ಜನರು ಅವನ ಶಿಷ್ಯರಾದರು. ಅವನು ಅವರನ್ನು ಸುಮ್ಮನೇ ತನ್ನ ಹತ್ತರ ಇಟ್ಟುಕೊಂಡು ಕೂಡ್ರದೆ, ತನ್ನ ಧರ್ಮವನ್ನು ಉಪದೇಶಿಸಲಿಕ್ಕೆ ಬೇರೆ ಬೇರೆ ಊರುಗಳಿಗೆ ಕಳಿಸಿ ಕೊಟ್ಟನು. ಆದ್ದರಿಂದ ಅಲ್ಲಲ್ಲಿಗೆ ವಿಹಾರಗಳು ತಲೆದೋರಲಾರಂಭಿಸಿದವು. *

ಮರುವರುಷ **ಗೌತಮನು** ತನ್ನ ಶಿಷ್ಯರೊಂದಿಗೆ **ರಾಜಗೃಹಕ್ಕೆ** ಹೋದನು. ಕೂಡಲೆ ಅಲ್ಲಿಯ ಅರಸನಾದ ಬಿಂಬಿಸಾರನು ಬೌದ್ಧ ಧರ್ಮದ ದೀಕ್ಷೆಯನ್ನು ತೆಗೆದುಕೊಂಡು, ಅದನ್ನು ತನ್ನ **ರಾಜ್ಯದ**ಲ್ಲಿ ಹಬ್ಬಿಸಲಿತ್ತುಗಡೆಮಾಡಿದನು. ಮುಂದೆ **ಗೌತಮನು** ತನ್ನ ತಂದೆಯನ್ನು ಕಾಣಲಿಕ್ಕೆ **ಕಪಿಲವಸ್ತು**ಪಟ್ಟಣಕ್ಕೆ ಹೋದನು. ಅಲ್ಲಿಯ ಎಲ್ಲ ಮುಖ್ಯಜನರು ಬಂದು ಅವನನ್ನು ಎದುರುಗೊಂಡು ಕರೆಕೊಂಡು ಹೋದರು. ಮರುದಿವಸ ಅವನು ತನ್ನ ನಿತ್ಯಕ್ರಮದಂತೆ ಭಿಕ್ಷೆಗೆ ಹೊರಟ ಸುದ್ದಿಯನ್ನು ಕೇಳಿ, ಶುದ್ಧೋಧನನು ಅವನನ್ನು ತನ್ನ ಮನೆಗೆ ಕರೆಕೊಂಡು ಹೋದನು. **ಗೌತಮನ** ಧರ್ಮಪತ್ನಿಯಾದ **ಯಶೋಧರೆಯು** ಹೊರತು ಉಳಿದವರೆಲ್ಲರೂ ಅವನನ್ನು ಕಾಣಲಿಕ್ಕೆ ಬಂದರು. ಆದ್ದರಿಂದ **ಗೌತಮನು** ಇಬ್ಬರು ಶಿಷ್ಯರೊಡನೆ ಅವಳೆಡೆಗೆ

---

* ಬಂಗಾಲಿಲಾಖೆಯಲ್ಲಿ ಬಿಹಾರವೆಂಬ ಪ್ರಾಂತವಿರುತ್ತದೆಂಬ ಮಾತು ಎಲ್ಲರಿಗೂ ಗೊತ್ತಿರುತ್ತದಷ್ಟೇ. ಈ 'ಬಿಹಾರ' ಶಬ್ದವು ವಿಹಾರದ ತದ್ಭವವಿರುತ್ತದೆ. ಆ ಪ್ರದೇಶದಲ್ಲಿ ಬೌದ್ಧರ ವಿಹಾರಗಳು ತುಂಬಿದ್ದರಿಂದ ಅದಕ್ಕೆ ಬಿಹಾರ ಪ್ರಾಂತವೆಂಬ ಹೆಸರು ಬಂದಿರುತ್ತದೆ.

ಹೋಗಿ, ಅವಳಿಗೂ ತನ್ನ ಮಗನಾದ ರೋಹುಲನಿಗೂ ತನ್ನ ಮತದ ದೀಕ್ಷೆಯನ್ನು ಕೊಟ್ಟು, ತಾನು ಮೊದಲಿದ್ದ ರಾಜಗೃಹಕ್ಕೆ ತಿರುಗಿ ಬಂದನು. ಬಳಿಕ ಉಪಾಲಿ ಎಂಬೊಬ್ಬ ನಾವಲಿಗನೂ, ಉಗ್ರಸೇನ ನೆಂಬೊಬ್ಬ ಡೊಂಬನೂ, ಈಮತಕ್ಕೆ ಸೇರಿದರು. ಈಪ್ರಕಾರ ಗೌತಮನು* ಮುಂದೆ ೪೫ ವರುಷಗಳ ವರೆಗೆ ಜಾತಿಕುಲವಯಸ್ಸಿನ ಭೇದವನ್ನು ನೋಡದೆ, ಎಲ್ಲ ಜನರಿಗೂ ತನ್ನ ಮತವನ್ನು ಉಪದೇಶಿ ಸಿದನು. ಅವನು ಒಂದು ದಿನ ಒಬ್ಬ ಬಡ ಕಮ್ಮಾರನ ಮನೆಗೆ ಊ ಟಕ್ಕೆ ಹೋಗಿ, ಅಪೂತ್ತಿನಿಂದ ಬೇನೆಬಿದ್ದು, ಮುಂದೆ ತುಸು ದಿವ ಸದಲ್ಲೇ ನಿರ್ವಾಣಹೊಂದಿದನು (ಕ್ರಿ. ಮು. ೪೭೭). ಅವನು ಸಾಯುವ ಮುಂದೆ ತನ್ನ ಪ್ರಿಯಶಿಷ್ಯನಾದ ಆನಂದನಿಗೆ ಹೇಳಿ ದ್ದೇನಂದರೆ:–ಆನಂದ, ನನಗೆ ೮೦ ವರ್ಷಗಳಾಗುತ್ತಾ ಬಂದವು. ಇನ್ನು ಮುಂದೆ ನಾನು ಈಜಗತ್ತಿನಲ್ಲಿ ಇರುವದಿಲ್ಲ. ನೀನು ನಿನ್ನ ಸದಸದ್ವಿಚಾರವೆಂಬ ದೀವಿಗೆಯು ಬೆಳಕಿನಿಂದ ಕಾಲಕಳೆ; ಸ್ವಾವಲಂ ಬನವನ್ನು ಬಿಡಬೇಡ. ಹೊರಗಿನ ಪದಾರ್ಥವನ್ನು ಆಶ್ರಯಿಸಲಿಚ್ಛಿ ಸಬೇಡ. ಸತ್ಯಮಾರ್ಗವನ್ನು ದೃಢವಾಗಿ ನಂಬು.

**ಬೌದ್ಧಮತ**–ಈಮತದ ಎಲ್ಲ ತತ್ವಗಳು ಹೆಸರಾದ ಮೂರು ಪೀಠಿಕೆ–(ಸೂತ್ರಪೀಠಿಕೆ, ವಿನಯಪೀಠಿಕೆ, ಅಭಿಧರ್ಮಪೀಠಿ ಕೆ) ಗಳಲ್ಲಿ ಸಂಗ್ರಹಿಸಲ್ಪಟ್ಟಿರುತ್ತವೆ; ಇವೇ ಬೌದ್ಧರ ವೇದಗಳು. ಸೂತ್ರಪೀಠಿಕೆಯಲ್ಲಿ ಗೌತಮನು ಆಡಿದ್ದೂ ಮಾಡಿದ್ದೂ ವಿವರಿಸ ಲ್ಪಟ್ಟಿವೆ. ವಿನಯಪೀಠಿಕೆಯು ವಿಹಾರದೊಳಿರುವ ಗಂಡಸರೂ ಹೆಂಗಸರೂ ತಂತಮ್ಮೊಳಗೆ ಹೇಗೆ ನಡೆದುಕೊಳ್ಳಬೇಕೆಂಬದನ್ನು ತಿಳಿಸುತ್ತದೆ. ಅಭಿಧರ್ಮಪೀಠಿಕೆಯಲ್ಲಿ ಬೇರೆ ಬೇರೆ ಲೋಕಗ ಳಲ್ಲಿ ಮನುಷ್ಯನು ಹೊಂದುವ ಸ್ಥಿತಿ, ಮೂಲತತ್ವಗಳ ನಿರ್ಣಯ, ಜೀವನದ ಕಾರಣ, ಮುಂತಾದ ವಿಷಯಗಳ ವಿಚಾರವಿರುತ್ತದೆ.

ಗೌತಮನು ನಿರ್ವಾಣಹೊಂದಿದ ವರುಷವೇ ೫೦೦ ಮಂದಿ ಶಿಷ್ಯರು ರಾಜಗೃಹದಲ್ಲಿ ಒಟ್ಟುಗೂಡಿ, ಅವನ ಗ್ರಂಥಗಳನ್ನು ಹಾಡಿ

* ಸಾಮಾನ್ಯ-ಸ್ವಾಮಿತ್ವ-ಪದ್ಧತಿಯನ್ನು ಎಲ್ಲರಿಗಿಂತ ಮೊದಲು ಹುಡುಕಿ ತೆಗೆದವನು ಗೌತಮಬುದ್ಧನೇ ಸರಿ. ಅವನ ಶಿಷ್ಯರ ವಿಹಾ ರಗಳಲ್ಲಿ ಯೋಗಿಗಳೂ ಯೋಗಿನಿಯರೂ ನನ್ನದು ತನ್ನದೆಂಬ ವಿ ಚಾರವಿಲ್ಲದೆ ಸುಖದಿಂದ ಇರುತ್ತಿದ್ದರು.

ಪಾತವಾದಿದರು. ಮುಂದೆ ೧೦೦ ವರ್ಷಗಳ ಬಳಿಕ ಬೌದ್ಧರಲ್ಲಿ ಮತಭೇದವು ಹುಟ್ಟಿದ್ದರಿಂದ ಕ್ರಿ. ಮು. ೩೭೭ ರಲ್ಲಿ ಮತ್ತೊಂದು ಸಭೆಯು ಕೂಡಿತು. ಆದರೆ ಅದರಿಂದೇನೂ ನಿಷ್ಪನ್ನವಾಗಲಿಲ್ಲ; ಆದ್ದರಿಂದ ಉತ್ತರದ ಬೌದ್ಧರು ( ನೇಪಾಳ–ತಿಬೇಟ–ಚೀನ–ಜಪಾನ ದೇಶದವರು ), ದಕ್ಷಿಣದ ಬೌದ್ಧರಿಂದ ( ಸಿಂಹಲದ್ವೀಪ–ಬ್ರಹ್ಮದೇಶ–ಸಯಾಮು ದೇಶದವರಿಂದ ) ಬಿನ್ನರಾಗಿರುವರು. ಮಗಧದ ಚಕ್ರವರ್ತಿಯಾದ ಅಶೋಕನು ಕ್ರಿ. ಮು. ೨೪೨ ರಲ್ಲಿ ೧೦೦೦ ಮಂದಿ ಬೌದ್ಧಧರ್ಮೋಪದೇಶಕರ ಸಭೆಯನ್ನು ಕೂಡಿಸಿ, ಬೇರೆ ಬೇರೆ ದೇಶಗಳಿಗೆ ಬೌದ್ಧಮತವನ್ನು ಬೋಧಿಸಲಿಕ್ಕೆ ಜನರನ್ನು ಕಳುಹಿದನು. ಇದೇ ಕಾಲಕ್ಕೆ ಸಿಂಹಲದ್ವೀಪ–ಬ್ರಹ್ಮದೇಶ–ಸಯಾಮು ದೇಶದವರು ಬೌದ್ಧಮತವನ್ನು ಸ್ವೀಕರಿಸಿದರು. ಆದ್ದರಿಂದ ದಕ್ಷಿಣ ಬೌದ್ಧರು ಕಾದಿಟ್ಟ ಪೀಠಿಕೆಗಳು ಹೆಚ್ಚು ಪುರಾತನವೂ ಹೆಚ್ಚು ವಿಶ್ವಸನೀಯವಾದವೂ ಇರುತ್ತವೆ. ಏಕೆಂದರೆ ಮುಂದೆ ಆಯ್ದಾರು ನೂರು ವರುಷಗಳ ಮೇಲೆ, ಅಂದರೆ ಕ್ರಿಸ್ತಶಕದ೨೦೦ ರಿಂದ ೪೦೦ ರ ವರೆಗೆ ಚೀನದೇಶದಲ್ಲಿಯೂ ಕ್ರಿಸ್ತಶಕದ ೬೦೦ ರಲ್ಲಿ ಜಪಾನದಲ್ಲಿಯೂ ಬೌದ್ಧಮತವು ಹಬ್ಬಿತು.*

---

* ಅಶೋಕ, ಕನಿಷ್ಕ, ಶಿಲಾದಿತ್ಯ ಮುಂತಾದ ದೊಡ್ಡದೊಡ್ಡ ಸಾರ್ವಭೌಮರಿಂದ ಪೋಷಿಸಲ್ಪಟ್ಟ ಈಬೌದ್ಧಧರ್ಮವು ನಮ್ಮ ಈಭರತಖಂಡದಲ್ಲಿ ಹೇಗೆ ನಷ್ಟವಾಯಿತೆಂಬುದು ಬಹುಗೌರವದ ಪ್ರಶ್ನವಿರುತ್ತದೆ. ಈಸಂಬಂಧದಿಂದ ನಮಗೆ ಸಾಕಷ್ಟು ಆಧಾರಗಳು ದೊರೆಯದಿದ್ದರೂ, ಸಾಧಾರಣ ಅನುಮಾನದಿಂದ ನಮಗೆ ತಿಳಿಯುವದೇನಂದರೆ:—ಕ್ರಿಸ್ತಶಕದ ೮ನೆಯ ಶತಕದಲ್ಲಿ ದಕ್ಷಿಣದೇಶದೊಳಗೆ ಕುಮಾರಿಲಭಟ್ಟನೆಂಬ ಬ್ರಾಹ್ಮಣನಿರುತ್ತಿದ್ದನು. ಇವನು ಕಾರ್ತಿಕೇಯನ ಅವತಾರನೆಂದು ನಾವು ನಂಬುತ್ತೇವೆ. ಇವನ ಕಾಲಕ್ಕೆ ಬೌದ್ಧರು ಬಹು ದುರಾಚಾರಿಗಳಾದ್ದರಿಂದ, ಇವನು ಕೆಲವು ದಿವಸ ಬೌದ್ಧಧರ್ಮವನ್ನು ಸ್ವೀಕರಿಸಿ, ಅಧರ್ಮಿಗಳ ವಾಮಾಚಾರಗಳನ್ನೆಲ್ಲ ಮನಗಂಡು, ಮತ್ತೆ ಬ್ರಾಹ್ಮಣನಾಗಿ, ಆಕಾಲಕ್ಕೆ ಈ ದಕ್ಷಿಣದೇಶದಲ್ಲಿ ಬಲಾಢ್ಯ ಅರಸನಾದ ಸುಧನ್ವನೆಂಬ ಬೌದ್ಧ ಚಕ್ರವರ್ತಿಯನ್ನು ಕೆಲವು ಅದ್ಭುತ ತತ್ವಗಳಿಂದ ಸನಾತನವೇದಧರ್ಮಕ್ಕೆ ಒಲಿಸಿಕೊಂಡು, ರಾಮೇಶ್ವರದಿಂದ ಹಿಮಾಲಯದ ವರೆಗೆ ಎಲ್ಲ

ಬೌದ್ಧಧರ್ಮವು ವೇದಧರ್ಮದಿಂದ ತೀರ ಸ್ವತಂತ್ರವಾದುದೆಂದು ತಿಳಿಯ ಕೂಡದು. ಏಕೆಂದರೆ ಗೌತಮನು ಯಜ್ಞಯಾಗ-ಹೋಮಹವನ-ಜಪತಪಗಳು ಮೂಲವೇದಧರ್ಮದ ಭಾಗಗಳಲ್ಲೆಂತಲೂ ಅವು ಮುಕ್ತಿಗೆ ಎಷ್ಟುಮಾತ್ರವೂ ಸಾಧನವಲ್ಲೆಂತಲೂ ನೆರೆನಂಬಿ, ತನ್ನ ಹೊಸಧರ್ಮವನ್ನುಪದೇಶಿಸುವಾಗ, ತಾನು ಶುದ್ಧವಾದ ವೇದಧರ್ಮವನ್ನೇ ಉಪದೇಶಿಸುತ್ತೇನೆಂದು ತಿಳಿದಿದ್ದನು. ಇದಲ್ಲದೆ ಅವನ ಧರ್ಮದ ಮುಖ್ಯತತ್ವಗಳೆಲ್ಲ ವೇದಧರ್ಮದ ಮೂಲತತ್ವಗಳನ್ನು ಅವಲಂಬಿಸಿರುವವು. ಅದು ಹೇಗೆಂದರೆ:- (೧) ವೇದಧರ್ಮದ ಯೋಗಿಸನ್ಯಾಸಿಗಳ ಜೀವನ ಕ್ರಮದಿಂದ ಬೌದ್ಧಮತದ ವಿಹಾರ ಪದ್ಧತಿಯು ಬೆಳೆಯಿತು; (೨) ಉಪನಿಷತ್ತಿನಲ್ಲಿ ಹೇಳಿದ ಪುನರ್ಜನ್ಮತತ್ವದಿಂದ ಮನುಷ್ಯನು ಈಜನ್ಮದಲ್ಲಿ ಮಾಡಿದ ಕರ್ಮದ ಫಲವನ್ನು ಮುಂದಿನ ಜನ್ಮದಲ್ಲಿ ಅನುಭವಿಸುತ್ತಾನೆಂಬ ಬೌದ್ಧಮತದ ಕರ್ಮತತ್ವವು ಹೊರಟಿತು; (೩) ನಿಷ್ಕಲಂಕವಾದ ಮನುಷ್ಯನ ಶುದ್ಧಾತ್ಮವು ದೇವರಲ್ಲಿ ಐಕ್ಯವಾಗುತ್ತದೆಂದು ಉಪನಿಷತ್ತಿನಲ್ಲಿ ಹೇಳಿದ ತತ್ವದಿಂದಲೇ ಬೌದ್ಧಮತದ ನಿರ್ವಾಣವು ಹುಟ್ಟಿತು; (೪) ಹಿಂದೂ ದೇವತೆಗಳಾದ ಇಂದ್ರಬ್ರಹ್ಮ ಮುಂತಾದವರಿಗಾದರೂ ಬೌದ್ಧಮತದಲ್ಲಿ ಇಂಬುದೊರೆಯಿತು; ಏಕೆಂದರೆ ಮನುಷ್ಯರಂತೆ ಈ ದೇವತೆಗಳಾದರೂ ಶುದ್ಧಸ್ಥಿತಿಯಾದ ನಿರ್ವಾಣವನ್ನು ಬಯಸುತ್ತಾರೆಂದು ಬೌದ್ಧರು ನಂಬುವರು.

ಬೌದ್ಧರು ಶುದ್ಧವಾದ ಪುಣ್ಯಾತ್ಮವು ಅಂದರೆ ನಿರ್ವಾಣವು ಈ ಜಗತ್ತಿನಲ್ಲಿ ಎಲ್ಲಕ್ಕೂ ಹೆಚ್ಚಿನದೆಂದು ನಂಬುತ್ತಾರೆ. ಮನುಷ್ಯರೂ ದೇವದೂತರೂ ದೇವತೆಗಳೂ ಈಯುಲಭ್ಯವಾದ ನಿರ್ವಾಣವನ್ನು ಪಡೆಯಲಿಕ್ಕೆಯಾವಾಗಲೂ ಪ್ರಯತ್ನಮಾಡುತ್ತಾರೆಂದು ಅವರು ತಿಳಿಯುವರು. ಗೌತಮಬುದ್ಧನು ಈಯಮೌಲ್ಯವಾದ ನಿರ್ವಾಣವನ್ನು ಈಜನ್ಮದಲ್ಲೇ ದೊರಕಿಸಿದ್ದರಿಂದ ಅವನು ಮಾನಾರ್ಹನು ವಂದ್ಯನು, ಪೂಜ್ಯನು ಎಂದು ಬೌದ್ಧರ ತಿಳುವಳಿಕೆಯುಂಟು. ಆದ್ದ

---

ಕಡೆಗೂ ಹಬ್ಬಿದ ಬೌದ್ಧರನ್ನು ಕೊಲ್ಲಿಸಿದನಂತೆ. ಬಳಿಕ ಶಂಕರಾಚಾರ್ಯರು ಅಲ್ಲಲ್ಲಿ ಉಳಿದ ಬೌದ್ಧರನ್ನು ವಾದದಲ್ಲಿ ಗೆದ್ದು, ಜನರ ಮನಸ್ಸಿಗೆ ಆದ ಬೌದ್ಧಮತದ ಸಂಸ್ಕಾರವನ್ನು ದೂರಮಾಡಿದರು.

ರಿಂದ ಬೌದ್ಧಮತದ ಮುಖ್ಯದೈವತಾಯೆಂದರೆ ಬುದ್ಧನು. ಅವನ ತರುವಾಯ, ನಿರ್ವಾಣವನ್ನು ಸಂಪಾದಿಸಿದ ಬೋಧಿಸತ್ವರು ಬರುತ್ತಾರೆ. ಈನಿರ್ವಾಣವನ್ನು ದೊರಕಿಸಲಿಕ್ಕೆ ಮುಖ್ಯಮಾರ್ಗವಾದುದೇ ಬಂಧುಪ್ರೀತಿಯು. ಆದಕಾರಣ ಬೌದ್ಧಮತವು ಶುದ್ಧವಾದ ಪುಣ್ಯಾತ್ಮವನ್ನು ಪಡೆಯಲಿಕ್ಕೆ ಒಂದು ಸ್ವಶಿಕ್ಷಣಪದ್ಧತಿಯೇ ಇರುತ್ತದೆಂದ ಹೇಳಬಹುದು. ಈಬೌದ್ಧಮತದ ನಾಲ್ಕು ತತ್ವಗಳಾವವೆಂದರೆ:–(೧) ಜನ್ಮವು ದುಃಖಮಯವಾಗಿರುತ್ತದೆ; (೨) ಜೀವದ ಬಯಕೆಯು ಈದುಃಖದ ಕಾರಣವಾಗಿರುತ್ತದೆ; (೩) ಈ ಬಯಕೆಯನ್ನು ನಿಗ್ರಹಿಸಿದರೆ ಈದುಃಖವು ಇಲ್ಲದಂತಾಗುವದು; (೪) ಜೀವಿಗಳು ಕರ್ತವ್ಯಮಾರ್ಗವನ್ನು ಕಯ್ಕೊಳ್ಳುವುದರಿಂದ ಈ ನಿಗ್ರಹಶಕ್ತಿಯು ಅವರಲ್ಲಿ ನೆಲೆಗೊಳ್ಳುತ್ತದೆ. ಈಕರ್ತವ್ಯಮಾರ್ಗವು ೮ ಪ್ರಕಾರದ್ದಿರುತ್ತದೆ; ಆದ್ದರಿಂದ ಇದಕ್ಕೆ **ಎಣ್ಬಗೆಯಮಾರ್ಗ**ವೆನ್ನುತ್ತಾರೆ. ಈಬಗೆಗಳಾವವೆಂದರೆ:–ಸತ್ಯಜ್ಞಾನ, ಹವಣಿಕೆ, ಮಾತು, ನಡತೆ, ಸದಾಚಾರ, ಶ್ರಮ, ವಿಚಾರ, ಧ್ಯಾನ. ಈಕರ್ತವ್ಯಮಾರ್ಗಕ್ಕೆ ಒಮ್ಮೊಮ್ಮೆ **ಮಧ್ಯಮಾರ್ಗ**ವೆನ್ನುತ್ತಾರೆ; ಏಕೆಂದರೆ ಇದು ವಿಷಯಾಭಿಲಾಷೆಯನ್ನೂ ನಿರರ್ಥಕವಾದ ಜಪಗಳನ್ನೂ ಒಂದೊಂದು ಬದಿಗೆ ಬಿಟ್ಟು, ಅವುಗಳ ನಟ್ಟನಡುವೆ ಹಾಯುತ್ತದೆ.

ಬೌದ್ಧಧರ್ಮದಂತೆ ಸ್ವರ್ಗಲೋಕ ಅಥವಾ ಪರಲೋಕವಿಲ್ಲ. ಬೌದ್ಧರು ಸ್ವರ್ಗಲೋಕದ ಸುಖಗಳನ್ನು ನಂಬುವದಿಲ್ಲ. ಮನುಷ್ಯನು ಈಜನ್ಮದಲ್ಲೇ ನಿರ್ವಾಣವೆಂಬ ಪುಣ್ಯಾಕರವಾದ ಸ್ಥಿತಿಯನ್ನು ಹೊಂದಬಹುದೆಂದು ಅವರು ತಿಳಿಯುತ್ತಾರೆ; ಇದಕ್ಕೂ ಹೆಚ್ಚಿನ ಸ್ಥಿತಿಯುಂಟೆಂದು ಅವರು ಎಣಿಸುವದಿಲ್ಲ. ಅವರ ಮತದಂತೆ ನಿರ್ವಾಣಹೊಂದದ ಮನುಷ್ಯನು ಮಾತ್ರ ಪುನರ್ಜನ್ಮಕ್ಕೊಳಗಾಗುತ್ತಾನೆ. ಅವರು ಮನುಷ್ಯನಿಗೆ ಮರಣರಹಿತವಾದ ಆತ್ಮವಿರುತ್ತದೆಂದು ನಂಬುವದಿಲ್ಲ; ಆದರೆ ಮನುಷ್ಯನು ಸತ್ತ ಬಳಿಕ ಅವನ ಕರ್ಮವು ಉಳಿಯುತ್ತದೆಂತಲೂ ಆಕರ್ಮದಂತೆ ಎರಡನೆಯ ಜನ್ಮದಲ್ಲಿ ಮನುಷ್ಯನಿಗೆ ಫಲವಾಗುತ್ತದೆಂತಲೂ ಅವರ ಗ್ರಹಿಕೆಯುಂಟು

ಧರ್ಮಪದವೆಂಬ ಪುಸ್ತಕವೇ ಬೌದ್ಧಮತದ ಮುಖ್ಯಗ್ರಂಥವು ಇದರಲ್ಲಿ ನೀತಿಯ ನಿಯಮಗಳೂ ಉಪದೇಶಗಳೂ ತುಂಬಿರುತ್ತವೆ. ಇವುಗಳಲ್ಲಿ ಮುಖ್ಯವಾದ ಕೆಲವುಗಳನ್ನು ಉದಾಹರಣಾರ್ಥವಾಗಿ ಕೆಳಗೆ ಕೊಡುತ್ತೇವೆ:–

೫. ಹಗೆತನದಿಂದ ಹಗೆತನವೆಂದೂ ಕಡಮೆಯಾಗುವದಿಲ್ಲ; ಹಗೆತನವು ಪ್ರೀತಿಯಿಂದ ಕಡಮೆಯಾಗುತ್ತದೆ. ಇದೇ ಅದರ ಸ್ವಭಾವವು.

೫೧. ಆಡಿದಂತೆ ನಡೆಯದವನ ಮಾತುಗಳು ಸುವಾಸನೆಯಿಲ್ಲದ ಚಂದವಾದ ಹೂವುಗಳಂತೆ ನಿರರ್ಥಕವಾಗಿರುತ್ತವೆ.

೧೮೩. ಪಾಪಭೀತಿಯಿಂದಲೂ ಸತ್ಕೃತ್ಯದಿಂದಲೂ ಮನುಷ್ಯನ ಮನಸ್ಸು ಶುದ್ಧವಾಗುತ್ತದೆ. ಇದೇ ಬೌದ್ಧಮತದ ಮುಖ್ಯತತ್ವವು.

೧೮೪. ತಾಳ್ಮೆಯೇ ಹೆಚ್ಚಿನ ತಪಶ್ಚರ್ಯವು.

೨೦೨. ವಿಷಯಾಭಿಲಾಷೆಗಿಂತ ದೊಡ್ಡ ಬೆಂಕಿಯಿಲ್ಲ; ದ್ವೇಷಕ್ಕಿಂತ ಹೆಚ್ಚಿನ ಪಾಪವಿಲ್ಲ; ಮತ್ತು ಶಾಂತಿಗಿಂತ ಹೆಚ್ಚಿನ ಸುಖವಿಲ್ಲ.

೨೨೩. ಮನುಷ್ಯನು ಒಲುಮೆಯಿಂದ ಸಿಟ್ಟನ್ನೂ ಒಳ್ಳೆತನದಿಂದ ಕೇಡಕನ್ನೂ ಕೊಡಗಯ್ಯಿಂದ ಜೀನತನವನ್ನೂ ದಿಟದಿಂದ ಸುಳ್ಳನ್ನೂ ಗೆಲ್ಲ ಬೇಕು.

೨೫೨. ಎರಡನೆಯವರ ತಪ್ಪು ನಮಗೆ ಬಲುಬೇಗ ತಿಳಿಯುತ್ತದೆ; ಆದರೆ ನಮ್ಮ ತಪ್ಪು ನಮಗೆ ತಿಳಿಯುವದು ಬಹುಕಷ್ಟ.

ಇನ್ನು, ಒಂದೆರಡು ಸುಬೋಧವಾದ ಕಥೆಗಳನ್ನು ಕೊಟ್ಟು ಈಚರಿತ್ರವನ್ನು ಮುಗಿಸುವೆವು.

(ಅ) ಪೂರ್ವಕಾಲದಲ್ಲಿ ಕಾಶಿಯ ಬಲಾಢ್ಯ ಅರಸನಾದ ಬ್ರಹ್ಮದತ್ತನೆಂಬವನು ತನ್ನ ಸೆರೆಯಲ್ಲಿದ್ದ ಕೋಶಲದ ಬಡ ಅರಸನಾದ ದಿಘಿತಿಯೆಂಬವನನ್ನು ಸೋಲಿಸಿ, ಅವನ ರಾಜ್ಯವನ್ನು ಸೆಳೆಕೊಂಡು, ಅವನನ್ನು ಕೊಲ್ಲಿಸಿ ಬಿಟ್ಟನು. ಸಾಯುವಾಗ ದಿಘಿತಿಯು ತನ್ನ ಚಿಕ್ಕಮಗನಾದ ದಿಘಾವಿಗೆ ಹೇಳಿದ್ದೇನಂದರೆ :–ಮಗನೇ ಹಗೆತನದಿಂದ ಹಗೆತನವು ತಗ್ಗುವದಿಲ್ಲ; ಪ್ರೀತಿಯಿಂದ ಮಾತ್ರ ಹಗೆತನವು ತಗ್ಗುತ್ತದೆ. ಮುಂದೆ ಕೆಲಕಾಲವಾದ ಬಳಿಕ ದಿಘಾವು ಬ್ರಹ್ಮದತ್ತನ ಊಳಿಗಕ್ಕೆ ನಿಂತನು. ಅವನು ಒಂದು ದಿನ ಜೇಗಿನಲ್ಲಿ ಹಾಡುತ್ತಿರುವಾಗ ಅರಸನು ಅವನ ಇಂಪಾದ ದನಿಯನ್ನು ಕೇಳಿ, ಮೆಚ್ಚಿ, ಅವನನ್ನು ತನ್ನ ಅನುಚರನನ್ನು ಮಾಡಿಕೊಂಡನು. ತರುವಾಯ ಒಂದು ದಿನ ಅರಸನು ಬೇಟೆಯಾಡಿ ದಣಿದು, ದಿಘಾವಿನ ತೊಡೆ

ಯು ಮೇಲೆ ಮಲಗಿಕೊಂಡಾಗ, ದಿಘಾವಿನ ಮನಸ್ಸಿನಲ್ಲಿ ತನ್ನ ತಂದೆತಾಯಿಗಳನ್ನು ಕೊಲ್ಲಿಸಿದ ಬ್ರಹ್ಮದತ್ತನ ಶಿರಚ್ಛೇದ ಮಾಡಬೇಕೆಂಬ ಆಲೋಚನೆ ಹುಟ್ಟಿ, ಅವನು ತನ್ನ ಖಡ್ಗವನ್ನು ಒರೆಯಿಂದ ಹಿರಿದನು. ಅಷ್ಟರಲ್ಲಿ ಅವನಿಗೆ ತನ್ನ ತಂದೆಯ ಉಪದೇಶವು ನೆನಪಾಗಲು, ಅವನು ಆಖಡ್ಗವನ್ನು ತಿರುಗಿ ಒರೆಯಲ್ಲಿ ಸೇರಿಸಿದನು. ಅರಸನು ಎಚ್ಚತ್ತ ಬಳಿಕ ದಿಘಾವು ತನ್ನ ಮನಸ್ಸಿನಲ್ಲಿ ಬಂದ ದುಷ್ಟವಿಚಾರಗಳನ್ನು ಅವನ ಮುಂದೆ ಹೇಳಿ ಕ್ಷಮೆಬೇಡಿಕೊಂಡನು. ಆಗ ಅರಸನು ಆಚ್ಚರಿಗೊಂಡು ಕನಿಕರಬಟ್ಟು, ದಿಘಾವಿಗೆ ತನ್ನ ಮಗಳನ್ನು ಮದುವೆಮಾಡಿಕೊಟ್ಟು, ತನ್ನ ರಾಜ್ಯವನ್ನಾದರೂ ಅವನಿಗೆ ಕೊಟ್ಟು ಬಿಟ್ಟನು.

(೩) ಭರದ್ವಾಜನೆಂಬೊಬ್ಬ ಬ್ರಾಹ್ಮಣನು ಸುಗ್ಗಿಯನ್ನು ಪೂಜೆಮಾಡುತ್ತಿರುವಾಗ ಒಬ್ಬ ಶ್ರಮಣನು ಬಂದು "ಮಹಾರಾಯಾ ಭಿಕ್ಷೆಹಾಕು" ಎಂದನು. ಆಗ ಭರದ್ವಾಜನು–ನಾನು ಹೊಲವನ್ನು ಹೊಡೆದು ಬಿತ್ತಿ ಬೆಳೆದು ಉಣ್ಣುತ್ತೇನೆ; ನೀನೂ ಹೀಗೆ ಮಾಡಿದರೆ ನಿನಗೆ ಕೂಳು ದೊರೆಯುವದು, ಎಂದನು. ಆಗ ಶ್ರಮಣನು–ಬ್ರಾಹ್ಮಣಾ, ನಾನಾದರೂ ನಿನ್ನಂತೆ ಹರಗಿ ಬಿತ್ತಿ ಬೆಳೆದು ಉಣ್ಣುತ್ತೇನೆ, ಅಂದನು. ಅದಕ್ಕೆಬ್ರಾಹ್ಮಣನು ಅದು ಹೇಗೆಂದು ಕೇಳಲು, ಶ್ರಮಣನು–ಬ್ರಾಹ್ಮಣನೇ ಹೇಳುತ್ತೇನೆ ಕೇಳು:– ಈಜಗತ್ತೆಂಬ ಹೊಲದಲ್ಲಿ ನಾನು ಭಕ್ತಿಯೆಂಬ ಬೀಜವನ್ನು ಬಿತ್ತುತ್ತೇನೆ; ನನ್ನ ಒಳ್ಳೆಲಸಗಳೆಂಬ ಮಳೆಯು ಹೊಲವನ್ನು ಹಸಿಮಾಡುತ್ತದೆ. ಬುದ್ಧಿ ವಿನಯಗಳೇ ನನ್ನ ಕೆಂಟೆಯ ಭಾಗಗಳು, ನನ್ನ ತವಕವೇ ಆರೆಂಟೆ ಯನ್ನೆಳೆಯುವ ಎತ್ತುಗಳು, ನನ್ನ ಮನಸ್ಸೇ ಆಯೆತ್ತುಗಳಿಗೆ ಕಟ್ಟಿದ ಹಗ್ಗವು. ನಾನು ಧರ್ಮವೆಂಬ ಹಿಡಿಕೆಯನ್ನು ಹಿಡಿದು, ಆತುರತೆಯೆಂಬ ಬಾರುಕೋಲನ್ನುಪಯೋಗಿಸಿ, ದುಃಖವೆಂಬ ಕೋಲಿಯನ್ನು ಕಿತ್ತಿ, ಮಾಯೆಯೆಂಬ ಕಳೆಯನ್ನು ತೆಗೆದು, ಹೊಲವನ್ನು ಹಸನಮಾಡಿ, ಬಿತ್ತಿ ಬೆಳೆದು, ನಿರ್ವಾಣವೆಂಬ ಅಮೃತತುಲ್ಯವಾದ ಫಲವನ್ನು ತಿನ್ನುತ್ತೇನೆ.

# ೨ ಮಹಾವೀರ.

ಬೌದ್ಧಧರ್ಮವು ಕಳೆಗುಂದುತ್ತ ಹೋದ ಹಾಗೆ ಜೈನಮತವು ತಲೆದೋರಲಾರಂಭಿಸಿತು. ಈಗ ಸುಮಾರು ಸಾವಿರ ವರ್ಷಗಳ ಹಿಂದೆ ಜೈನಮತವು ಇಡಿ ಭರತಖಂಡದಲ್ಲಿ ಹಬ್ಬಿತ್ತೆಂಬದೂ ವಿಶೇಷವಾಗಿ ನಮ್ಮ ಈಕರ್ನಾಟಕದಲ್ಲಿ ಪ್ರಬಲವಾಗಿತ್ತೆಂಬದೂ ಈಗಲಾದರೂ ಶ್ರಾವಣಬೆಳಗೊಳ ಮುಂತಾದ ಸ್ಥಳಗಳು ಈಮತದ ಹೆಚ್ಚಳದ ಕುರುಹಗಳಾಗಿರುತ್ತವೆಂಬದೂ ಎಲ್ಲ ವಾಚಕರಿಗೆ ಗೊತ್ತಿರಬಹುದು. ಈಮತವು ಈಗ ಕ್ಷೀಣದಶೆಯನ್ನು ಹೊಂದಿದ್ದರಿಂದಲೂ ಇದರ ಸಂಬಂಧದಿಂದ ನಮ್ಮ ಜನರಿಗೆ ಹೆಚ್ಚಿಗೇನೂ ಗೊತ್ತಿಲ್ಲದ್ದರಿಂದಲೂ ಈಮತದವರ ಕಡೆಯ ಮುಖ್ಯತೀರ್ಥಂಕರನಾದ* ಮಹಾವೀರನ ಚರಿತ್ರವನ್ನು ಕೊಟ್ಟು ಈಮತದ ಮುಖ್ಯತತ್ವಗಳನ್ನು ವಿವರಿಸುವೆವು.

ಜೈನರು ಪೂರ್ವಕಾಲದಲ್ಲಿ ೨೪ ಮಂದಿ ತೀರ್ಥಂಕರರಾಗಿ ಹೋದರೆಂತಲೂ ಅವರೊಳಗೆ ಕಡೆಯವನು ಮಹಾವೀರನೆಂತಲೂ ಹೇಳುತ್ತಾರೆ. ಈಮಹಾವೀರನು ಎಷ್ಟೋ ಜನ್ಮಗಳನ್ನು ತಾಳಿ ಶುದ್ಧನಾಗಿ, ಕಡೆಯ ಜನ್ಮದಲ್ಲಿ ತೀರ್ಥಂಕರನಾದನಂತೆ. ಅದು ಹೇಗಂದರೆ:-ಇವನು ಅನೇಕವರ್ಷಗಳ ಹಿಂದೆ ಶತ್ರುಮರ್ದನನೆಂಬ ಅರಸನ ರಾಜ್ಯಕ್ಕೆ ಸೇರಿದ ವಿಜಯವೆಂಬ ಗ್ರಾಮದಲ್ಲಿ ಗೌಡನಾಗಿ ಹುಟ್ಟಿದನು; ಆಜನ್ಮದಲ್ಲಿ ತನ್ನ ಭಕ್ತಿಯಿಂದಲೂ ಭೂತದಯೆಯಿಂದಲೂ ಸೌಧರ್ಮವೆಂಬ ಸ್ವರ್ಗವನ್ನು ಹೊಂದಿ, ಬಹುದಿವಸ ಅಲ್ಲಿಯ ಸುಖವನ್ನನುಭೋಗಿಸಿ, ಮುಂದೆ ಋಷಭನೆಂಬ ೧ನೆಯ ತೀರ್ಥಂಕರನ ಮೊಮ್ಮಗನಾಗಿ ಹುಟ್ಟಿದನು. ಬಳಿಕ ಮೂರನೆಯ ಜನ್ಮದಲ್ಲಿ ರಾಜಗೃಹದಲ್ಲಿ ವಿಶ್ವಭೂತನೆಂಬ ಅರಸನಾದನು; ಹೀಗೇ ಬಹುಜನ್ಮಗಳಾದ ಬಳಿಕ ಇವನು ಜಿತಶತ್ರುವೆಂಬವನ ಮಗನಾಗಿ ನಂದನನೆಂಬ ಹೆಸರನ್ನು ಧರಿಸಿದನು. ಈಜನ್ಮದಲ್ಲಿ

---

* ತೀರ್ಯತೇ ಸಂಸಾರಸಮುದ್ರೋऽನೇನೇತಿ ತೀರ್ಥಂ, ತತ್ಕರೋತೀತಿ ತೀರ್ಥಂಕರಃ, ಅಂದರೆ ಸಂಸಾರವೆಂಬ ಸಮುದ್ರವನ್ನು ದಾಟಿಸುವವನೇ ತೀರ್ಥಂಕರನು.

ಇವನು ಬಹುತಪಶ್ಚರ್ಯೆಮಾಡಿ, ತನ್ನ ಪುಣ್ಯದಿಂದ ಪವನವೆಂಬ ರಾಜ್ಯದ ಅರಸನಾದ ಸಿದ್ಧಾರ್ಥನ ರಾಣಿಯಾದ ತ್ರಿಶಲೆಯೆಂಬ ವಳ ಹೊಟ್ಟೆಯಲ್ಲಿ ಚೈತ್ರ ಶುದ್ಧ ತ್ರಯೋದಶೀ ದಿವಸ ಹುಟ್ಟಿದನು. ಸಿದ್ಧಾರ್ಥನು ಈಮಗುವಿಗೆ ವರ್ಧಮಾನನೆಂಬ ಹೆಸರನ್ನಿಟ್ಟನು. ಮುಂದೆ ಶಕ್ರದೇವನು ಈಮಗುವಿಗೆ ಮಹಾವೀರನೆಂಬ ಯಥಾರ್ಥವಾದ ಹೆಸರನ್ನು ಕೊಟ್ಟನು.

ಮಹಾವೀರನು ದೊಡ್ಡವನಾದ ಬಳಿಕ ಅವನ ತಂದೆಯು ಅವನಿಗೆ ಸಮರವೀರನೆಂಬರಸನ ಮಗಳಾದ ಯಶೋಧರೆಯನ್ನು ಮದುವೆಮಾಡಿದನು. ಅವಳಲ್ಲಿ ಪ್ರಿಯದರ್ಶನೆಯೆಂಬೊಬ್ಬ ಮಗಳು ಹುಟ್ಟಿದಳು. ಮುಂದೆ ಮಹಾವೀರನು ೨೮ ವರ್ಷದವನಿದ್ದಾಗ ಅವನ ತಂದೆತಾಯಿಗಳು ಮಡಿದರು. ಬಳಿಕ ಅವನು ಹೆಂಡರುಮಕ್ಕಳು-ಮನೆಮಾರುಗಳನ್ನು ತೊರೆದು, ಸನ್ಯಾಸಾಶ್ರಮತೆಗೆದುಕೊಂಡು, ಮುಂದೆ ೧೨ ವರ್ಷಗಳ ವರೆಗೆ ದೇಶಪರ್ಯಟನಮಾಡಿದನು. ಈಕಾಲದಲ್ಲಿ ಅವನು ಎಷ್ಟೋ ತಿಂಗಳುಗಳ ವರೆಗೆ ತುದಿಸಾಲಿಗೆಯನ್ನು ಮೂಗಿಗೆ ಬಂದೇ ಸವನೇ ಹಚ್ಚಿಕೊಂಡು, ಮೌನವ್ರತಧರಿಸಿದನೆಂತಲೂ ಎಷ್ಟೋ ಉಪವಾಸಗಳನ್ನು ಮಾಡಿದನೆಂತಲೂ ಜೈನರು ನಂಬುತ್ತಾರೆ. ಅದು ಹೇಗೇ ಇರಲಿ, ಅವನು ರಾಜಗೃಹದ ನೆರೆಯಲ್ಲಿರುವ ನಾಲಾಂಡವೆಂಬ ಊರಿಗೆ ಹೋದಾಗ, ಗೋಶಾಲನೆಂಬೊಬ್ಬ ಕೀಳ್ಕುಲದ ಗೃಹಸ್ಥನು ಅವನ ಶಿಷ್ಯನಾದನು. ಮಹಾವೀರನು ರಾಜಗೃಹದಿಂದ ಶ್ರಾವಸ್ತಿಗೆ ಹೋಗಿ, ಅಲ್ಲಿಂದ ವೈಶಾಲಿ (ಬಿಹಾರದ ರಾಜಧಾನಿ) ಗೆ ಹೋದನು. ಮುಂದೆ ಅವನು ವಜ್ರಭೂಮಿ-ಶುದ್ಧಿಭೂಮಿಯೆಂಬ ಪ್ರಾಂತಗಳಿಗೆ ಹೋಗಲು, ಅಲ್ಲಿದ್ದ ಮ್ಲೇಂಛರು ಅವನನ್ನು ಪರಿಪರಿಯಿಂದ ಪೀಡಿಸಿದರು. ಕೆಲವರು ಅವನನ್ನು ಹೊಡೆದರು, ಕೆಲವರು ಅವನ ಮೇಲೆ ಬಾಣಗಳನ್ನು ಸುರಿಸಿದರು, ಕೆಲವರು ಅವನ ಮೇಲೆ ನಾಯಿಗಳನ್ನು ಬಿಟ್ಟರು. ಆದರೆ ಅವನು ಆತ್ಮರಕ್ಷಣಾರ್ಥವಾಗಿಯಾದರೂ ಅವರಿಗೆ ಪ್ರತಿಕಾರಮಾಡಲಿಲ್ಲ. ತನ್ನ ಪ್ರವಾಸದ ೯ ನೆಯ ವರುಷ ಮಹಾವೀರನ ಮೌನವ್ರತವು ಮುಗಿಯಿತು; ಮತ್ತು ಆಗ ಗೋಶಾಲನು ಅವನಿಂದ ತೇಜಲೇಸ್ಯ (ಬೆಂಕಿಯನ್ನು ಹೊರಡಿಸುವ) ವಿದ್ಯವನ್ನು ಕಲಿತುಕೊಂಡು, ಅವನ ಶಿಷ್ಯತ್ವವನ್ನು ಬಿಟ್ಟುಕೊಟ್ಟನು. ಬಳಿಕ ಮಹಾವೀರನು ಕೌಶಾಂಬಿ

ಗೆ ಹೋಗಿ, ಅಲ್ಲಿಯ ಜನರಿಂದ ಸತ್ಕಾರವನ್ನು ಹೊಂದಿದನು. ಇಂತು ಅವನು ೧೨೩ ವರುಷ ತಪಶ್ಚರ್ಯವ ಮಾಡಿದ್ದಲ್ಲದೆ, ಈಯವಧಿಯಲ್ಲಿ ೧೦ ವರುಷ ೬೪೯ ದಿವಸ ಅನ್ನನೀರಿಲ್ಲದೆ ಇದ್ದನಂತೆ. ಈಸಮಯಕ್ಕೆ ಅವನ ತಪಸ್ಸು ಮುಗಿದುದರಿಂದ ವೈಶಾಖಶುದ್ಧ ೧೦ ದಿವಸ ಅವನು ರುಜುಪಾಲಿಕಾಯೆಂಬ ನದಿಯ ದಂಡೆಯ ಮೇಲಿರುವ ಶಾಲವೃಕ್ಷದ ಬುಡದಲ್ಲಿ ಕುಳಿತಿರುವಾಗ ಅವನಿಗೆ ಕೇವಲ (ಪರಮ ಜ್ಞಾನ) ಉಂಟಾಯಿತು. ಬಳಿಕ ಅವನು ಬಿಹಾರದಲ್ಲಿರುವ ಅಪಾಪಪುರಿಗೆ ಹೋಗಿ, ಅಲ್ಲಿಯ ಜನರಿಗೆ ಉಪದೇಶಮಾಡಿದನು. ಆವುಪದೇಶದ ತಾತ್ಪರ್ಯವೇನೆಂದರೆ :-

ಈಜಗತ್ತು ಅಮರ್ಯಾದಿತವಾಗಿರುತ್ತದೆ. ಕರ್ಮವೇ ಇದರ ಕಾರಣವು. ವಿಚಾರಶೂನ್ಯವಾದ ಜೀವವು ನೀರಿನಲ್ಲಿ ಒಗೆದ ಕಲ್ಲಿನಂತೆ ತಳಕ್ಕೆ ಹೋಗುತ್ತದೆ; ಆದರೆ ವಿಚಾರಿಯಾದ ಜೀವವು ತನ್ನ ಸತ್ಕೃತ್ಯದಿಂದ ಉಚ್ಚಸ್ಥಿತಿಯನೆಯ್ದುತ್ತದೆ. ಪ್ರತಿಯೊಬ್ಬ ಮನುಷ್ಯನು ಹಿಂಸೆಯನ್ನು ಮಾಡಬಾರದು, ಮತ್ತು ಸುಳ್ಳನ್ನು ಆಡಬಾರದು, ಇಷ್ಟೇ ಅಲ್ಲ; ಆದರೆ ಎರಡನೆಯವರಾದರೂ ಈಪಾಪಕೃತ್ಯಗಳನ್ನು ಮಾಡದಂತೆ ಎಚ್ಚರಪಡಬೇಕು. ಪ್ರತಿಯೊಬ್ಬ ಮನುಷ್ಯನು ಎರಡನೆಯವರನ್ನು ನೋಯಿಸಬಾರದು; ಮತ್ತು ಅವರ ಆಸ್ತಿಯನ್ನು ಅಪಹರಿಸಬಾರದು. ಬ್ರಹ್ಮಚಾರಿಯಾಗಿರುವದು ಒಳ್ಳೆಯದು; ಏಕೆಂದರೆ ಸಂಸಾರದ ಹೊರೆಯು ಹೊರಲಾರದಂತಹದು; ಅನಿವಾರ್ಯಪಕ್ಷದಲ್ಲಿ ಸಂಸಾರಿಕರಾಗುವವರು ದೊಡ್ಡ ತಪ್ಪುಗಳು ತಮ್ಮಿಂದಾಗದಂತೆ ಜಾಗೃತರಾಗಿರಬೇಕು.

ಈಕಾಲದಿಂದ ಮಹಾವೀರನ ಕೀರ್ತಿಯು ದೇಶದಲ್ಲೆಲ್ಲ ಹಬ್ಬಿತು. ಇಂದ್ರಭೂತಿ ಅಗ್ನಿಭೂತಿ ವಾಯುಭೂತಿ ಸುಧರ್ಮ ಮಂಡಿತ ಅಕಂಪಿತ ಮುಂತಾದ ಬ್ರಾಹ್ಮಣಪಂಡಿತರು ಅವನ ಕೂಡ ವಾದಮಾಡಿ ಸೋತು ಅವನ ಶಿಷ್ಯರಾದರು. ಇವರೇ ೧೧ ಮಂದಿ ಮಹಾವೀರನ ಗಣಧರರು. ಬಳಿಕ ಮಹಾವೀರನು ತನ್ನ ಗಣಧರರೊಡನೆ ಗಂಗಾನದಿಯಗುಂಟ ಪ್ರವಾಸಮಾಡಿ, ಎಷ್ಟೋ ಜನರನ್ನು ತನ್ನ ಮತಕ್ಕೊಲಿಸಿಕೊಂಡು, ಅಪಾಪಪುರಿಗೆ ತಿರುಗಿ ಬಂದು, ಅಲ್ಲಿ ತನ್ನ ೭೨ನೆಯ ವಯಸ್ಸಿನಲ್ಲಿ ಕಾರ್ತಿಕವದ್ಯ ೧ ದಿವಸ ನಿರ್ವಾಣ ಹೊಂದಿದನು. ಬಂಗಾಲದ ಜೈನರು ಇವನು ಕ್ರಿ. ಮು. ೬೬೬ರಲ್ಲಿ ಪ್ರಾಣಬಿಟ್ಟನೆಂದು ಹೇಳುತ್ತಾರೆ.

ಜೈನಮತ-ಜೈನತತ್ವಶಾಸ್ತ್ರದಲ್ಲಿ ಜಗತ್ತಿನ ಮೂಲಕಾರಣದ ವಿಚಾರವೇ ಇಲ್ಲ. ಜೈನರು ಜೀವವು ಆತ್ಮದಿಂದ ಭಿನ್ನವಾದ್ದೆಂದು ಎಣಿಸುವದಿಲ್ಲ. ಎಲ್ಲ ಜಗತ್ತಿನಲ್ಲಿ ಒಟ್ಟು ೯ ತತ್ವಗಳು ಅಥವಾ ಸತ್ಯಪದಾರ್ಥಗಳಿರುತ್ತವೆಂದು ಅವರು ನಂಬುವರು. ಈತತ್ವಗಳಾವವೆಂದರೆ:-೧ ಜೀವ, ೨ ಅಜೀವ, ೩ ಪುಣ್ಯ, ೪ ಪಾಪ, ೫ ಆಸ್ರವ, ೬ ಸಂವರ, ೭ ನಿರ್ಜರಾ, ೮ ಬಂಧ, ೯ ಮೋಕ್ಷ.† ಪುನರ್ಜನ್ಮವು ಇಲ್ಲದಂತೆ ಮಾಡಿಕೊಳ್ಳುವದೇ ಜೈನರ ಮೋಕ್ಷವು. ಇದಕ್ಕೂ ಹೆಚ್ಚಿನ ಸೌಖ್ಯವನ್ನು ಅವರು ಎಂದೂ ಬಯಸುವದಿಲ್ಲ.

ಜೈನರಲ್ಲಿ ಯತಿಗಳೂ ಶ್ರಾವಕರೂ (ಗೃಹಸ್ಥರೂ) ಎಂಬ ೨ ವರ್ಗಗಳುಂಟು. ಈಯೆರಡೂ ವರ್ಗದವರು ತೀರ್ಥಂಕರರು ಮಾಡಿಕೊಟ್ಟ ನೇಮಗಳನ್ನು ಅನುಸರಿಸಲಿಕ್ಕೆ ಬೇಕು. ಆದರೆ ಯತಿಗಳು ಬ್ರಹ್ಮಚಾರಿಗಳೂ ಮಿತಾಹಾರಿಗಳೂ ಮೌನವ್ರತದವರೂ ಆಗಿರಬೇಕು; ಮತ್ತು ಶ್ರಾವಕರು ತಮ್ಮ ಗೃಹಸ್ಥಧರ್ಮವನ್ನನುಸರಿಸಿ, ತೀರ್ಥಂಕರರನ್ನು ಪೂಜಿಸುವದಲ್ಲದೆ ಯತಿಗಳನ್ನು ಮನ್ನಿಸಬೇಕು. ಅಹಿಂಸಾ, ಸತ್ಯ, ಪ್ರಾಮಣಿಕತಾ, ಏಕಪತ್ನೀವ್ರತ, ನಿರಿಚ್ಛಾ ಇವೇ ಜೈನರ ನೀತಿಸಂಬಂಧದ ಕರ್ತವ್ಯಗಳು. ಸೌಮ್ಯತ್ವ, ದಾತೃತ್ವ, ಭಕ್ತಿ, ಕಾಯಕ್ಲೇಶ, ಇಂದ್ರಿನಿಗ್ರಹ ಇವೇ ಅವರ ಧರ್ಮ

---

† ೧ ಜೈನರು ಜೀವಿಗಳಲ್ಲಿ ಚಲ, ನಿಶ್ಚಲವೆಂಬ ೨ ವಿಭಾಗಗಳನ್ನು ಮಾಡುತ್ತಾರೆ. ಪ್ರಾಣಿಗಳೇ ಚಲಜೀವಿಗಳು ಮತ್ತು ವೃಕ್ಷಾದಿಗಳೇ ನಿಶ್ಚಲಜೀವಿಗಳು. ಇಂದ್ರಿಯಗಳ ಸಂಖ್ಯೆಯಂತೆ ಚಲಜೀವಿಗಳಲ್ಲಿ ಬೇರೆ ಬೇರೆ ವರ್ಗಗಳಾಗುತ್ತವೆ. ಜೀವವು ನಿತ್ಯವಾದ್ದೂ ಅನಂತವಾದ್ದೂ ಆದರೂ ಪುಣ್ಯಪಾಪಗಳಿಗನುಸರಿಸಿ ಬೇರೆ ಬೇರೆ ಜನ್ಮಗಳಲ್ಲಿ ಬೇರೆ ಬೇರೆ ರೂಪವನ್ನು ಹೋಂದುತ್ತದೆ.

೨ ಜೈನರು ಅಜೀವದಲ್ಲಿ ಧರ್ಮಾಸ್ತಿಕಾಯ, ಅಧರ್ಮಾಸ್ತಿಕಾಯ, ಆಕಾಶಾಸ್ತಿಕಾಯ, ಕಾಲ, ಪುದ್ಗಲ ಮುಂತಾದ ೧೪ ವಿಭಾಗಗಳನ್ನು ಮಾಡುತ್ತಾರೆ. ಆದರೆ ಅವುಗಳ ಭೇದವು ಚೆನ್ನಾಗಿ ಗೊತ್ತಾಗುವದಿಲ್ಲ.

೩ ಪುಣ್ಯದಲ್ಲಿ ೪೨ ವಿಭಾಗಗಳು ಕಲ್ಪಿಸಲ್ಪಟ್ಟವೆ. ಅವುಗಳಲ್ಲಿ ಉಚ್ಚೈರ್ಗೋತ್ರ, ಸುರಗತಿ, ಪಂಚದೈವ ಮುಂತಾದವು ಮುಖ್ಯವಾದವುಗಳು.

ಗಳು. ಜೈನರು ಬ್ರಾಹ್ಮಣರಂತೆ ಉಪ್ಪು ಜೇನುತುಪ್ಪ ಹೊಗೆಸೊಪ್ಪು ಮುಂತಾದ ಖಾದ್ಯಪೇಯಗಳನ್ನು ಬಿಡುವ ವ್ರತವನ್ನು ಮಾಡುತ್ತಾರೆ. ಅವರು ಹುಳಹುಪ್ಪಡಿಗಳನ್ನು ಕೊಲ್ಲಬಾರದೆಂಬ ಉದ್ದೇಶದಿಂದ ನೀರನ್ನು ಮುಚ್ಚಿಡುತ್ತಾರೆ, ಕತ್ತಲಾಗುವದರೊಳಗೇ ಸಂಜೆಯ ಊಟ ಮುಗಿಸುತ್ತಾರೆ, ಮತ್ತು ಕೆಲವರು ಪ್ರಾಣಿಗಳು ತಮ್ಮ ಬಾಯೊಳಗೆ ಹೋಗ ಕೂಡದೆಂದು ಬಾಯ ಮೇಲೆ ಅರಿವೆಯನ್ನು ಕಟ್ಟಿಕೊಳ್ಳುತ್ತಾರೆ. ಅವರ ಯತಿಗಳು ತಮ್ಮ ಮನಸ್ಸಿಗೆ ಬಂದಾಗ ತೀರ್ಥಂಕರರ ಪೂಜೆಯನ್ನು ಬಿಟ್ಟು ಬಿಡಬಹುದು. ಆದರೆ ಶ್ರಾವಕರು ದಿನಾಲು ತೀರ್ಥಂಕರರ ಗುಡಿಗೆ ಹೋಗಿ, ಮೂರು ಪ್ರದಕ್ಷಿಣೆ[3] ಹಾಕಿ, ಫಲಪುಷ್ಪಗಳನ್ನು ಅರ್ಪಿಸಿ, ತೀರ್ಥಂ

---

೪ ಪಾಪದಲ್ಲಿ ೮೨ ಪ್ರಕಾರಗಳಿರುತ್ತವೆ.

೫ ಆಸ್ರವವೆಂದರೆ ಪಾಪಕೃತ್ಯಗಳ ಮೂಲಕಾರಣವು. ೫ ಕರ್ಮೇಂದ್ರಿಯಗಳೂ (ಸಿಟ್ಟು ಹೆಮ್ಮೆ ಲೋಭ, ಮೋಸ ಈ ೪) ಕಷಾಯಗಳೂ ೫ ಅವ್ರತಗಳೂ (ಸುಳ್ಳಾಡೋಣ ಕದಿಯೋಣ ಮು.,) (ತನುಮನಧನದ) ೩ ಯೋಗಗಳೂ ೨೬ ಕ್ರಿಯೆಗಳೂ ಈ ಮೂಲ ಕಾರಣದ ಪ್ರಕಾರಗಳಾಗಿರುತ್ತವೆ.

೬ ಸಂವರದಲ್ಲಿ ೬ ಮುಖ್ಯ ಪ್ರಕಾರಗಳಿರುತ್ತವೆ:—೧ ಸಮಿತಿ (ಲಕ್ಷ್ಯ), ೨ ಗುಪ್ತಿ, ೩ ಪರಿಷಹಾ (ತಾಳ್ಮೆ), ೪ ಯತಿಧರ್ಮ, ೫ ಭಾವನಾ (ನಿಶ್ಚಯಜ್ಞಾನ) ೬ ಚಾರಿತ್ರ (ಆಚಾರ).

೭ ನಿರ್ಜರಾ ಅಂದರೆ ತಪಶ್ಚರ್ಯವು. ಇದರಲ್ಲಿ ಕಾಯಿಕ-ಮಾನಸಿಕಗಳೆಂಬ ೨ ಪ್ರಕಾರಗಳುಂಟು. ಬ್ರಹ್ಮಚರ್ಯ ಉಪವಾಸ ಮೌನವ್ರತ ಮುಂತಾದವು ಕಾಯಿಕ ಪ್ರಕಾರದವು; ಪಶ್ಚಾತ್ತಾಪ ಭಕ್ತಿ ಶಿಷ್ಟಸಂರಕ್ಷಣ ಅಭ್ಯಾಸ ಧ್ಯಾನ ಮುಂತಾದವು ಮಾನಸಿಕ ಪ್ರಕಾರದವು.

೮ ಬಂಧದಲ್ಲಿರುವ ೪ ಪ್ರಕಾರಗಳಾವವೆಂದರೆ:—ಪ್ರಕೃತಿ, ಸ್ಥಿತಿ, ಅನುಭೋಗ, ಪ್ರದೇಶ.

೯ ಮೋಕ್ಷದಲ್ಲಿರುವ ೯ ಪ್ರಕಾರಗಳಾವವೆಂದರೆ:—೧ ಸತ್ಪದಪ್ರರೂಪಣ, ೨ ದ್ರವ್ಯಪ್ರಮಾಣ, ೩ ಕ್ಷೇತ್ರಪ್ರಮಾಣ, ೪ ಸ್ಪರ್ಶನ, ೫ ಕಾಲ, ೬ ಅಂತರ, ೭ ಭಾಗ, ೮ ಭಾವ, ೯ ಅಲ್ಪಬಹುತ್ವ.

ಕರರನ್ನು ಸ್ತುತಿಸಬೇಕು.* ಬಳಿಕ ಕೆಲವರು ಆ ಗುಡಿಯಲ್ಲಿ ಜೈನ ಯತಿಗಳು ಓದುತ್ತಿರುವ ಕಲ್ಪಸೂತ್ರ ಅಥವಾ ಭಕ್ತಾಮರ ಎಂಬ ಗ್ರಂಥಗಳನ್ನು ಕೇಳುತ್ತಾರೆ. ಆದರೆ ಈಗುಡಿಗಳಲ್ಲಿ ತೋರುವ ಒಂದು ವಿಚಿತ್ರವಾದ ಸಂಗತಿಯೇನಂದರೆ ಈಗುಡಿಗಳ ಅರ್ಚಕರು ಬ್ರಾಹ್ಮಣರೇ ಇರುತ್ತಾರೆ.

ಜೈನರ ಮುಖ್ಯ ಆರಾಧ್ಯದೇವತೆಗಳು ತೀರ್ಥಂಕರರಾದರೂ ಅವರು ಹಿಂದೂದೇವತೆಗಳನ್ನು ಕೆಲಮಟ್ಟಿಗೆ ಪೂಜಿಸುತ್ತಾರೆ.† ಈ ದೇವತೆಗಳಲ್ಲಿ ಅವರು ನಾಲ್ಕು ವರ್ಗಗಳನ್ನು ಕಲ್ಪಿಸುತ್ತಾರೆ. ಅವುಗಳಾವವೆಂದರೆ:-ಭುವನಪತಿಗಳು, ವ್ಯಂತರರು, ಜ್ಯೋತಿರ್ಷ್ಕರು, ವೈಮಾನಿಕರು. ಅಸುರರು, ನಾಗರು, ಗರುಡ, ದಿಕ್ಪಾಲರು, ಅಗ್ನಿ, ವಾಯು, ಸಮುದ್ರ ಮುಂತಾದವರು ಭುವನಪತಿಗಳು. ಪಿಶಾಚರು, ಭೂತಗಳು, ಕಿನ್ನರರು, ಗಂಧರ್ವರು ಮುಂತಾದವರು ವ್ಯಂತರರು. ಸೂರ್ಯ ಚಂದ್ರ ಗ್ರಹ ನಕ್ಷತ್ರಗಳು ಜ್ಯೋತಿಷ್ಕರು. ಸೌಧರ್ಮ, ಈಶಾನ, ಮಹೇಂದ್ರ, ಬ್ರಹ್ಮ ಸನತ್ಕುಮಾರ, ಶುಕ್ರ ಮುಂತಾದವರು ವೈಮಾನಿಕರು. ತೀರ್ಥಂಕರರು ಈ ನಾಲ್ಕೂ ವರ್ಗದವರಿಗಿಂತ ಹೆಚ್ಚಿನವರು. ಈಕಾಲದ ತೀರ್ಥಂಕರರು ೨೪ ಮಂದಿ ಪೂರ್ವಕಾಲದ ತೀರ್ಥಂಕರರು ೨೪ ಮಂದಿ ಮುಂದೆ ಆಗುವ ತೀರ್ಥಂಕರರು ೨೪ ಮಂದಿ, ಹೀಗೆ ಒಟ್ಟು ೭೨ ಮಂದಿ ತೀರ್ಥಂಕರರಿರುತ್ತಾರೆ. ಇವರ ಹೊರತು ರುಷಭಾನನ-

---

* ನಮೋ ಅರಿಹಂತಾನಾಮ್, ನಮೋ ಸಿದ್ಧಾನಾಮ್, ನಮೋ ಆಯರ್ಾನಾಮ್, ನಮೋ ಉಪಾಧ್ಯಾಯಾನಾಮ್, ನಮೋ ಸರ್ವಸಾಧೂನಾಮ್, ಇದೇ ಇವರ ಸ್ತುತಿಮಂತ್ರವು.

† ಜೈನರು ಇತ್ತಲಾಗಿ ಭೈರವ, ಕಾಳಿ, ಸರಸ್ವತಿ ಮುಂತಾದ ಹಿಂದೂ ದೇವತೆಗಳನ್ನಾದರೂ ಪೂಜಿಸಲಾರಂಭಿಸಿದ್ದಾರೆ. ದಕ್ಷಿಣದಲ್ಲಿ ಜೈನರು ಬ್ರಾಹ್ಮಣರ ಎಲ್ಲ ಸಂಸ್ಕಾರಗಳನ್ನು ಮಾಡುತ್ತಾರೆ; ಆದರೆ ಉತ್ತರ ಹಿಂದುಸ್ಥಾನದಲ್ಲಿ ನಾಮಕರಣ, ವಿವಾಹ, ಉತ್ತರಕಾರ್ಯ, ಈಮೂರು ಸಂಸ್ಕಾರಗಳನ್ನು ಮಾತ್ರ ಮಾಡುತ್ತಾರೆ. ಕೆಲವು ಜೈನರು ಪ್ರತಿತಿಂಗಳ ೨, ೫, ೮, ೧೧, ೧೪ನೆಯ ತಿಥಿಗಳಲ್ಲಿ ಉಪವಾಸಮಾಡುತ್ತಾರೆ.

ಚಂದ್ರಾನನ- ವಾರಿಸೇನ- ವರ್ಧಮಾನರೆಂಬ ನಾಲ್ಕು ಮಂದಿ ಶಾಶ್ವತಜಿನರಿರುತ್ತಾರೆಂದು ಹೇಮಚಂದ್ರನೆಂಬವನು ತನ್ನ ಗ್ರಂಥದಲ್ಲಿ ಬರೆಯುತ್ತಾನೆ.

ಜೈನರ ಹಬ್ಬಗಳು ಅವರ ಮುಖ್ಯತೀರ್ಥಂಕರರನ್ನು ಸಂಬಂಧಿಸಿರುತ್ತವೆ. ಪಾರ್ಸನಾಥ ಅಥವಾ ಸಮಿತ್‌ಶಿಖರವೆಂಬ ಗುಡ್ಡದ ಮೇಲೆ ೨೩ ನೆಯ ತೀರ್ಥಂಕರನಾದ ಪಾರ್ಶ್ವನಾಥನು ಮುಕ್ತಿಯನ್ನೈದಿದನು. ಆದ್ದರಿಂದ ಅಲ್ಲಿ ಪ್ರತಿವರ್ಷ ಮಾಘಮಾಸದಲ್ಲಿ ದೊಡ್ಡ ಜಾತ್ರೆ ಕೂಡುತ್ತದೆ, ಹಾಗೆಯೇ ವರ್ಧಮಾನನು ಮುಕ್ತಿಹೊಂದಿದ ಅಪಾಪಪುರಿಯಲ್ಲಿ ಪ್ರತಿವರ್ಷ ಕಾರ್ತಿಕಮಾಸದಲ್ಲಿ ದೊಡ್ಡ ಜಾತ್ರೆ ಕೂಡುತ್ತದೆ. ಗುಜರಾಥದಲ್ಲಿ ಅಬು-ಗಿರ್ನಾರಗಳು ಜೈನರ ಮುಖ್ಯಕ್ಷೇತ್ರಗಳು.

ಜೈನಮತವು ಎಂದು ಆರಂಭವಾಯಿತೆಂಬದು ವಾದಗ್ರಸ್ತವಿಷಯವೇ ಸರಿ. ಜೈನರು ತಾವು ಬೌದ್ಧಮತದವರಿಗಿಂತ ಪೂರ್ವದವರೆಂದು ಹೇಳುತ್ತಾರೆ. ಆದರೆ ಈಮಾತಿಗೆ ಸಾಕಷ್ಟು ಆಧಾರಗಳು ದೊರೆಯುವದಿಲ್ಲ. ಏಕೆಂದರೆ ಅವರ ಮುಖ್ಯಗ್ರಂಥವಾದ ಕಲ್ಪಸೂತ್ರವು ಆರೇಳುನೂರು ವರ್ಷಗಳ ಹಿಂದೆ ರಚಿಸಲ್ಪಟ್ಟಂತೆ ಅದರ ಭಾಷಾಪದ್ಧತಿಯಿಂದ ತೋರುತ್ತದೆ. ಇದಲ್ಲದೆ ಎಷ್ಟೋ ದೊಡ್ಡ ದೊಡ್ಡ ಜೈನಗ್ರಂಥಕಾರರು ಧಾರದ ಅರಸನಾದ ಭೋಜನ ಕಾಲದಲ್ಲಿ ಇದ್ದರು. ಮತ್ತೊಂದು ಕಾರಣವೇನಂದರೆ ಜೈನರ ತೀರ್ಥಂಕರರಾದ ವರ್ಧಮಾನ-ಪಾರ್ಶ್ವನಾಥರ ಗುಡಿಗಳು ಬಹಳ ಹಳೆ ಗುಡಿಗಳಂತೆ ತೋರುವದಿಲ್ಲ. ೩ ನೆಯ ಕಾರಣವೇನಂದರೆ, ಈ ಮತವು ಉತ್ತರ ಹಿಂದುಸ್ಥಾನದಲ್ಲಿ ಹೆಚ್ಚು ಹಬ್ಬುಗೊಳ್ಳದೆ, ಗುಜರಾಥದಲ್ಲಿ ೧೨ ನೆಯ ಶತಕದ ಕೊನೆಯಲ್ಲಿಯೂ † ನಮ್ಮ ಈಕರ್ನಾಟಕದಲ್ಲಿ * ೯ ನೆಯ ಶತಕದಲ್ಲಿಯೂ ಪ್ರಬಲವಾದ್ದಕ್ಕೆ ಹಲವು ತರದ ಲೇಖಗಳುಂಟು.

---

† ಹೇಮಚಂದ್ರನೆಂಬ ಜೈನಶ್ರಮಣನು ಗುಜರಾಥದ ಅರಸನಾದ ಕುಮಾರಪಾಲನನ್ನು ೧೧೬೪ ರಲ್ಲಿ ತನ್ನ ಮತಕ್ಕೆ ಒಲಿಸಿಕೊಂಡನು.

* ಮೈಸೂರ ಅರಸನಾದ ವಿಷ್ಣುವರ್ಧನನು ೧೨ನೆಯ ಶತಕದಲ್ಲಿ ಜೈನಮತವನ್ನು ಬಿಟ್ಟು ವೈಷ್ಣವನಾದನು. ಇದೇ ಸುಮಾರಿಗೆ ಕಲ್ಯಾಣದ ಅರಸನಾದ ಬಿಜ್ಜಳನು ಬಸವನ ಅನುಯಾಯಿಗಳಾದ ಲಿಂಗಾಯತರಿಂದ ಕೊಲ್ಲಲ್ಪಟ್ಟನು.

ಜೈನರಲ್ಲಿ ದಿಗಂಬರರು ಶ್ವೇತಾಂಬರರು ಎಂಬ ಎರಡು ವರ್ಗಗೆಳಿರುತ್ತವೆ. ಇವರೊಳಗಿರುವ ಭೇದಕಲಕ್ಷಣಗಳಾವವೆಂದರೆ :- ೧, ಶ್ವೇತಾಂಬರರು ತೀರ್ಥಂಕರರ ಮೂರ್ತಿಗಳಿಗೆ ಆಭರಣಗಳನ್ನಿಡಿಸಿ, ಪೂಜೆಮಾಡುತ್ತಾರೆ; ಆದರೆ ದಿಗಂಬರರು ಹಾಗೆ ವಸ್ತ್ರಗಳನ್ನಿಡಿಸುವದಿಲ್ಲ. ೨, ಶ್ವೇತಾಂಬರರು ೧೨ ಸ್ವರ್ಗಗಳೂ ೬೪ ಮಂದಿ ಇಂದ್ರರೂ ಇರುತ್ತಾರೆಂದು ತಿಳಿಯುತ್ತಾರೆ; ಆದರೆ ದಿಗಂಬರರು ೧೬ ಸ್ವರ್ಗಗಳೂ ೧೦೦ ಮಂದಿ ಇಂದ್ರರೂ ಇರುತ್ತಾರೆಂದು ನಂಬುತ್ತಾರೆ. ೩, ಶ್ವೇತಾಂಬರರ ಗುರುಗಳು ಪಾತ್ರೆಗಳಲ್ಲಿ ಊಟಮಾಡುತ್ತಾರೆ; ಆದರೆ ದಿಗಂಬರರು ತಮ್ಮ ಶಿಷ್ಯರು ಕೊಟ್ಟ ಅನ್ನವನ್ನು ತೆಗೆದುಕೊಂಡು ತಿನ್ನುತ್ತಾರೆ. ೪, ಶ್ವೇತಾಂಬರರು ಆವಾಗಲೂ ಒಂದು ಕುಂಚವನ್ನೂ ಒಂದು ಚಂಬುವನ್ನೂ ತಮ್ಮ ಸಂಗಡ ಒಯ್ಯುತ್ತಾರೆ; ಆದರೆ ದಿಗಂಬರರು ಹಾಗೆ ಮಾಡುವದಿಲ್ಲ. ೫, ಶ್ವೇತಾಂಬರರು ಅಂಗಗಳು (ಜೈನ ವೇದಗಳು) ತೀರ್ಥಂಕರರ ಶಿಷ್ಯರು ಬರೆದ ಗ್ರಂಥಗಳೆಂತಲೂ ಅವೇ ತಮ್ಮ ಮತದ ಮುಖ್ಯ ಗ್ರಂಥಗಳೆಂತಲೂ ನಂಬುತ್ತಾರೆ; ಆದರೆ ದಿಗಂಬರರು ಇತ್ತಲಾಗಿ ಬರೆದ ಗ್ರಂಥಗಳು ಮಾತ್ರ ಆಧಾರಗ್ರಂಥಗಳೆಂದು ತಿಳಿಯುತ್ತಾರೆ. ೬, ಶ್ವೇತಾಂಬರರು ಹೆಂಗಸರು ನಿರ್ವಾಣಹೊಂದಲಿಕ್ಕೆ ಅಯೋಗ್ಯರೆಂದು ತಿಳಿಯುತ್ತಾರೆ; ಆದರೆ ದಿಗಂಬರು ಹಾಗೆ ತಿಳಿಯುವದಿಲ್ಲ.

ಮೇಲೆ ವಿವರಿಸಿದ ವರ್ಗಗಳ ಹೊರತು ಜೈನರಲ್ಲಿ ಎಷ್ಟೋ ಸಣ್ಣ ಪುಟ್ಟ ವರ್ಗಗಳಿರುತ್ತವೆ. ಅವರಲ್ಲಿ ಜಾತಿಭೇದವು ಹೆಸರಿಗೆ ಮಾತ್ರ ವಿಲ್ಲ. ಜಾತಿಯ ಬದಲಾಗಿ ೮೪ ಗಚ್ಛಗಳು ಅಥವಾ ಗೋತ್ರಗಳು ಅವರಲ್ಲುಂಟು. ಕೆಲವು ಗಚ್ಛದವರೊಳಗೆ ಅನ್ನವ್ಯವಹಾರ ಅಥವಾ ಲಗ್ನವ್ಯವಹಾರವು ಆಗುವದಿಲ್ಲ. ಉತ್ತರ ಹಿಂದುಸ್ಥಾನದಲ್ಲಿ ಕೆಲವು ಗಚ್ಛದವರು ಶ್ರೀವೈಷ್ಣವರಿರುತ್ತಾರೆ.

ಒಟ್ಟಿನಮೇಲೆ ಜೈನರು ಶ್ರೀಮಂತರೂ ಸಾಹಸಿಗಳೂ ಉದ್ಯೋಗಿಗಳೂ ಇರುತ್ತಾರೆ. ಮಾರವಾಡ-ಮೇವಾಡಗಳಲ್ಲಿ ಇವರ ಸಂಖ್ಯೆಯು ಬಹಳ. ಕಲಕತ್ತಾ ಮುರ್ಸಿದಾಬಾದ ಕಾಶೀ ಮುಂಬಯಿ ಮುಂತಾದ ಸ್ಥಳಗಳಲ್ಲಿಯಾದರೂ ಇವರು ಪ್ರಬಲರಾಗಿರುತ್ತಾರೆ.

---



# ಶ್ರೀಮಚ್ಛಂಕರಾಚಾರ್ಯರು.

ಆರನೆಯ ಶತಕದ ಮಧ್ಯಭಾಗದೊಳಗೆ ಕೇರಲ (ಮಲಬಾರ) ವೆಂಬ ದೇಶದಲ್ಲಿ ಪೂರ್ಣಾನದಿಯ* ದಂಡೆಯಲ್ಲಿದ್ದ ವೃಷಾದ್ರಿಯೆಂಬೂರಲ್ಲಿ ಶಿವಗುರುವೆಂಬ ಒಬ್ಬ ಬ್ರಾಹ್ಮಣನು ಸತಿಯೆಂಬ ಹೆಂಡತಿಯೊಡನೆ ಸುಖದಿಂದಿರುತ್ತಿದ್ದನು. ಅವನಿಗೆ ಬಹು ದಿವಸ ಸಂತಾನವಾಗದ್ದರಿಂದ ಅವನು ಶಿವನನ್ನು ಪೂಜಿಸಲಾಗಿ, ಶಿವನು ಅವನ ಭಕ್ತಿಗೆ ಮೆಚ್ಚಿ, ವರವನ್ನು ಕೊಟ್ಟನು. ಆವರದಿಂದ

---

* ಈ ಪೂರ್ಣಾನದಿಯು ಎಲ್ಲಿ ಹರಿಯುತ್ತದೆಂಬದು ಗೊತ್ತಾಗುವದಿಲ್ಲ. ವರ್‍ಹಾಡದೇಶದಲ್ಲಿರುವ ಪೂರ್ಣಾನದಿಗೂ ಇದಕ್ಕೂ ಏನೂ ಸಂಬಂಧವಿಲ್ಲೆಂಬದು ಮೇಲೇ ಕಾಣಿಸುತ್ತದೆ.

ಶಂಕರಾಚಾರ್ಯರು ಹುಟ್ಟಿದರು.† ಇವರು ಮೂರು ವರ್ಷದವರಿರುವಾಗ ಇವರ ತಂದೆಯು ಸ್ವರ್ಗಸ್ಥನಾದನು. ಬಳಿಕ ಇವರ ತಾಯಿಯು ಬಹುಶ್ರಮದಿಂದ ಇವರನ್ನು ಜೋಕೆಮಾಡಿ, ಅಯ್ದನೆಯ ವರ್ಷ ಇವರ ಉಪನಯನಮಾಡಿಸಿದಳು.‡ ಆಗ ಇವರು ಎಲ್ಲ ವಿದ್ಯೆಗಳಲ್ಲಿ ಪಾರಂಗತರಾಗಿದ್ದರೆಂದು ದಂತ-ಕಥೆಯುಂಟು. ಮುಂದೆ ಕೆಲವು ದಿವಸಗಳಾದ ಬಳಿಕ ಒಂದು ದಿನ ಇವರು ಪೂರ್ಣಾನದಿಗೆ ಸ್ನಾನಮಾಡಲಿಕ್ಕೆ ಹೋದಾಗ ಒಂದು ದೊಡ್ಡ ಮೊಸಳೆಯು ಇವರ ಕಾಲನ್ನು ಹಿಡಿಯಿತು. ಆಗ ಇವರು ಹತ್ತಿರಿದ್ದ ತಮ್ಮ ತಾ

---

† ಇವರು ಇದ್ದ ಕಾಲವು ಇನ್ನೂ ವಾದಗ್ರಸ್ತವಿಷಯವಿರುತ್ತದೆ. ಆದರೆ ಕೈಲಾಸವಾಸಿಯಾದ ನಾಮದಾರ ಕಾಶಿನಾಥ ತ್ರಿಯಂಬಕ ತೇಲಂಗ ಇವರು ತಾವು ಪ್ರಸಿದ್ಧಮಾಡಿದ ಮುದ್ರಾರಾಕ್ಷಸವೆಂಬ ಗ್ರಂಥದ ಉಪೋದ್ಘಾತದಲ್ಲಿ ಶ್ರೀಮಚ್ಛಂಕರಾಚಾರ್ಯರು ಕ್ರಿಸ್ತಶಕದ ೪೯೦ಕ್ಕಿಂತ ಮೊದಲೇ ಇದ್ದರೆಂದು ಸಪ್ರಮಾಣವಾಗಿ ಸಿದ್ಧಮಾಡಿರುತ್ತಾರೆ. ಅದ್ದರಿಂದ ಆಚಾರ್ಯರು ೮ನೆಯ ಅಥವಾ ೯ನೆಯ ಶತಕದಲ್ಲಿದ್ದರೆಂಬ ಇಂಗ್ಲಿಷ ಗ್ರಂಥಕರ್ತರ ಬರಹವು ನಿರಾಧಾರವಾಗಿರುತ್ತದೆ.

‡ ಮುಂಜಿಯಾದ ಕೆಲವು ದಿವಸಗಳ ಮೇಲೆ ಶ್ರೀಮದಾಚಾರ್ಯರು ಭಿಕ್ಷೆಗೆ ಹೋದಾಗ ಒಬ್ಬ ಬಡವಿಯು ತನ್ನ ಮನೆಯಲ್ಲಿ ಏನೂ ಇಲ್ಲುದರಿಂದ ತನ್ನ ಕಯ್ಯಲ್ಲಿದ್ದ ಒಂದು ನೆಲ್ಲಿಕಾಯಿಯನ್ನು ಭಿಕ್ಷಾ ಹಾಕಿದಳು. ಆಗ ಆಚಾರ್ಯರು ಕನಿಕರಬಟ್ಟು, ಲಕ್ಷ್ಮಿಯನ್ನು ಸ್ತುತಿಸಿ ಪ್ರಸನ್ನಮಾಡಿಕೊಂಡು, ಆಬಡವಿಯ ಮನೆಯನ್ನು ಚಿನ್ನದ ನೆಲ್ಲಿಕಾಯಿಗಳಿಂದ ತುಂಬಿ ಬಿಟ್ಟರಂತೆ. ಮತ್ತೊಮ್ಮೆ ಸತಿಯು ನದಿಯಲ್ಲಿ ಮಯ್ತೊಳಕೊಂಡು ತಿರುಗಿ ಬರುವಾಗ, ಬಿಸಿಲಿನಿಂದ ಕಾಲು ಸುಟ್ಟು ಬಳಲಿದ್ದರಿಂದ, ಆಚಾರ್ಯರು ಆನದಿಯನ್ನು ಪ್ರಾರ್ಥಿಸಿ ಅದು ತಮ್ಮ ಮನೆಯ ಮುಂದೆ ಹರಿಯುವಂತೆ ಮಾಡಿದರಂತೆ. ಈಯಮಾನುಷಕೃತ್ಯಗಳ ಸುದ್ದಿಯನ್ನು ಕೇಳಿ, ಕೇರಲಾಧಿಪನಾದ ರಾಜಶೇಖರನು ತಾನೇ ಆಚಾರ್ಯರ ದರ್ಶನಕ್ಕೆ ಬಂದು, ತಾನು ರಚಿಸಿದ ೩ ನಾಟಕಗಳನ್ನು ತೋರಿಸಿ, ಅವರ ಸೂಚನೆಯಂತೆ ಅವುಗಳನ್ನು ತಿದ್ದಿದನು.

ಯಿಗೆ ಅಂದುದೇನಂದರೆ, "ಅಪ್ಪಾ ನನಗೆ ಸನ್ಯಾಸತೆಗೆದುಕೊಳ್ಳಲಿಕ್ಕೆ ತಾವು ಅಪ್ಪಣೆ ಕೊಟ್ಟರೆ ಮಾತ್ರ ಈ ಮೊಸಳೆಯು ನನ್ನನ್ನು ಬಿಡುವದು, ಇಲ್ಲದಿದ್ದರೆ ನುಂಗುವದು." ಆಗಲಾಸಾಧ್ವಿಯು ಮಗನು ಉಳಿಯಬೇಕೆಂಬ ಕಕ್ಕುಲತೆಯಿಂದ ತಾನು ಸತ್ತಬಳಿಕ ತನ್ನ ದೇಹಕ್ಕೆ ಅಗ್ನಿಸಂಸ್ಕಾರವನ್ನು ಅವರೇ ಮಾಡಬೇಕೆಂದು ವಚನ ತೆಗೆದುಕೊಂಡು, ಅವರಿಗೆ ಆಶ್ರಮತೆಗೆದುಕೊಳ್ಳಲಿಕ್ಕೆ ಅಪ್ಪಣೆಯನ್ನು ದಯಪಾಲಿಸಿದಳು. ಬಳಿಕ ಅವರು ಬದರಿಕಾಶ್ರಮಕ್ಕೆ† ಹೋಗಿ, ಗೌಡಪಾದಾಚಾರ್ಯರ ಶಿಷ್ಯರಾದ ಗೋವಿಂದನಾಥರಿಂದ ಸನ್ಯಾಸ-ದೀಕ್ಷೆಯ ತೆಗೆದುಕೊಂಡು,* ವ್ಯಾಸಸೂತ್ರಕ್ಕೆ ಟೀಕೆಯನ್ನು ಬರೆದು, ಅದನ್ನು ತಮ್ಮ ಶಿಷ್ಯರಿಗೆ ಕಲಿಸಿದರು; ಮುಂದೆ ಕೆಲವು ದಿವಸಗಳಾದ ಬಳಿಕ ಭಾಗೀರಥಿಯ ಸ್ನಾನಮಾಡಲಿಕ್ಕೆ ಕಾಶಿಗೆ ಹೋಗಿ, ಶ್ರೀವಿಶ್ವನಾಥನ ಪೂಜೆಯನ್ನು ಮಾಡುತ್ತ ಅಲ್ಲೇ ಕೆಲವು ದಿವಸ ಕಳೆದರು. ಅಲ್ಲಿ ಅವರಿಗೆ ವ್ಯಾಸಬ್ರಹ್ಮರ

---

† ಬದರಿಕೇಶ್ವರವು ಅಥವಾ ಬದರಿನಾಥವು ಹಿಮಾಲಯದ ಒಂದು (ಸಮುದ್ರದ ಸಪಾಟಿನಿಂದ ೨೩೨೧೦ ಅಡಿ ಎತ್ತರವಾದ) ಶಿಖರವಿರುತ್ತದೆ. ಇದು ವಾಯುವ್ಯಪ್ರಾಂತದೊಳಗೆ ಗಾರವಾಲ ಜಿಲ್ಲೆಯಲ್ಲುಂಟು. ಇಲ್ಲಿ ಶಂಕರಾಚಾರ್ಯರು ಕಟ್ಟಿಸಿದ ಒಂದು ವಿಷ್ಣುವಿನ ಗುಡಿಯಿದೆ. ಈ ಗುಡಿಯ ಮುಖ್ಯ ಪೂಜಾರಿಯು ರಾವಲನೆಂಬ ನಂಬೂರಿ ಬ್ರಾಹ್ಮಣನಿರುತ್ತಾನೆ. ಇದರ ಉಂಬಳಿ ಹಳ್ಳಿಗಳ ವಾರ್ಷಿಕೋತ್ಪನ್ನವು ಸುಮಾರು ೮೦೦೦ ರೂಪಾಯಿಯುಂಟು.

* ವ್ಯಾಸಃ ಪರಾಶರಸುತಃ ಕಿಲಸತ್ಯವತ್ಯಾಮ್ ।
ತಸ್ಯಾತ್ಮಜಃ ಶುಕಮುನಿಃ ಪ್ರಥಿತಾನುಭಾವಃ ॥
ತಚ್ಛಿಷ್ಯತಾಮುಪಗತಃ ಕಿಲಗೌಡಪಾದಃ ।
ಗೋವಿಂದನಾಥಮುನಿರಸ್ಯ ಚ ಶಿಷ್ಯಭೂತಃ ॥

ಶಂಕರವಿಜಯ ೫ನೆಯ ಸರ್ಗ ೧೦೫ನೆಯ ಶ್ಲೋಕ.

ಪರಾಶರ-ಸತ್ಯವತಿಯರ ಮಕ್ಕಳೇ ವ್ಯಾಸರು; ವ್ಯಾಸರ ಮಕ್ಕಳೇ ಶುಕಾಚಾರ್ಯರು; ಶುಕಾಚಾರ್ಯರ ಶಿಷ್ಯರೇ ಗೌಡಪಾದಾಚಾರ್ಯರು; ಅವರ ಶಿಷ್ಯರೇ ಗೋವಿಂದನಾಥರು. ಈಗೋವಿಂದನಾಥರು ಶೇಷನ ಅವತಾರವೆಂದು ನಾವು ನಂಬುತ್ತೇವೆ.

ದರ್ಶನವಾಯಿತಂತೆ. ಅವರು ಶಂಕರಾಚಾರ್ಯರು ವೇದಧರ್ಮ ವನ್ನು ಈಭರತಖಂಡದಲ್ಲಿ ಹಬ್ಬುಗೊಳಿಸಬೇಕೆಂಬ ಉದ್ದೇಶದಿಂದ, ಆಗ ಅವರಿಗಿದ್ದ ೧೬ ವರ್ಷದ ಆಯುಷ್ಯವನ್ನು ೩೨ ವರ್ಷ ಮಾಡಿದರಂತೆ.

ಮುಂದೆ ಆಚಾರ್ಯರು ಮಾಹಿಷ್ಮತೀ ನಗರಕ್ಕೆ ಹೋಗಿ, ಅಲ್ಲಿ ಮಂಡನಮಿಶ್ರನೆಂಬ ಕರ್ಮವಾದಿಯನ್ನು ಗೆಲ್ದು, ಅವನ ಹೆಂಡತಿಯಾದ ಸರಸ್ವತಿಯು ಕೂಡ ವಾದಮಾಡುವಾಗ ಕಾಮಶಾಸ್ತ್ರವು ತಮಗೆ ಗೊತ್ತಿಲ್ಲದ್ದರಿಂದ ಕೆಲವು ದಿವಸದ ಅವಕಾಶವನ್ನು ಆಕೆಯಿಂದ ಬೇಡಿಕೊಂಡು, ಪರಕಾಯಪ್ರವೇಶಮಾಡಿ,* ಮುಂದೆ ಕೆಲವು ದಿವಸಗಳಾದ ಬಳಿಕ ತಿರುಗಿ ತಾವು ಬಿಟ್ಟುಹೋದ ದೇಹದಲ್ಲಿ ಸೇರಿ, ಸರಸ್ವತಿಯನ್ನು ವಾದದಲ್ಲಿ ಗೆಲ್ದು, ಶೃಂಗೇರಿಗೆ † ಹೋಗಿ, ಅಲ್ಲಿ ತಾವು ಕಾಶ್ಮೀರದಿಂದ ತಂದ ಶಾರದಮ್ಮನ ಮೂರ್ತಿಯನ್ನು ಸ್ಥಾಪಿಸಿ, ತಮ್ಮ ಮುಖ್ಯಮಠವನ್ನು ಕಟ್ಟಿಸಿದರು. ಬಳಿಕ ಆಚಾರ್ಯರು ಅಲ್ಲಿ ತಮ್ಮ ಮುಖ್ಯಶಿಷ್ಯರಾದ ಸುರೇಶ್ವರಾಚಾರ್ಯರನ್ನು ಇರಿಸಿ, ಕಾಂಚೀ‡ಪಟ್ಟಣಕ್ಕೆ ಹೋದರು. ಅಲ್ಲಿರುವಾಗ ಅವರು ಉತ್ತಮವಾದ್ದೊಂದು ಗುಡಿಯನ್ನು ಕಟ್ಟಿಸಿ, ಶ್ರೀ ಚಕ್ರವನ್ನೂ ಕಾಮಾ

---

* ಶಂಕರಾಚಾರ್ಯರು ಅಮರು ಎಂಬ ಅರಸಿನ ದೇಹದಲ್ಲಿ ಸೇರಿ, ಕಾಮಶಾಸ್ತ್ರವನ್ನು ಕಲಿತರೆಂದು ಅಮರುಶತಕವೆಂಬ ಗ್ರಂಥದಲ್ಲಿ ಬರೆದದೆ.

† ಶೃಂಗೇರಿಯು ಮೈಸೂರ ಸಂಸ್ಥಾನದೊಳಗೆ ಕಡೂರ ಜಿಲ್ಲೆಯಲ್ಲಿ ಒಂದು ಪವಿತ್ರವಾದ ಹಳ್ಳಿ ಇರುತ್ತದೆ. ಇಲ್ಲಿ ವಿಭಾಂಡಕ ಮುನಿಯು ತಪಶ್ಚರ್ಯಮಾಡಿದನೆಂತಲೂ ರುಷ್ಯಶೃಂಗನು ಹುಟ್ಟಿದನೆಂತಲೂ ಹೇಳುತ್ತಾರೆ. ಇದೇ ಸ್ಮಾರ್ತರ ಮುಖ್ಯಮಠವು. ಈ ಮಠಕ್ಕೆ ಮೈಸೂರ ಅರಸರಿಂದ ತಿಂಗಳಿಗೆ ೧೦೦೦ ರೂ. ಸಲ್ಲುತ್ತವೆ.

‡ ಕಾಂಚಿಯು ಮದ್ರಾಸ ಇಲಾಖೆಯೊಳಗೆ ಚೆಂಗಲ್ಪೇಟ ಜಿಲ್ಲೆಯಲ್ಲಿ ಒಂದು ತಾಲೂಕಿನ ಊರಾಗಿರುತ್ತದೆ. ಇದಕ್ಕೆ ದಕ್ಷಿಣಕಾಶಿಯೆನ್ನುತ್ತಾರೆ. ಇಲ್ಲಿರುವ ಎರಡು ಹೆಸರಾದ ಗುಡಿಗಳನ್ನು ವಿಜಯನಗರದ ಕೃಷ್ಣರಾಯನು ಕಟ್ಟಿಸಿದನು (೧೫೦೯). ಜನರಲ್ ಬೇಲಿಯು ಸೋತ ಪೋಲಿಲೂರು ಇದರ ನೆರೆಯಲ್ಲೇ ಇರುತ್ತದೆ.

ಕ್ಷಿಯನ್ನೂ ಸ್ಥಾಪಿಸಿ, ಅಲ್ಲಿಂದ ಹೊರಟು ಚಿದಂಬರ,* ರಾಮೇಶರ್ವ‡ ಗೋಕರ್ಣ, ದ್ವಾರಕೆ* ಮುಂತಾದ ಕ್ಷೇತ್ರಗಳಿಗೆ ಹೋಗಿ, ಸೌರಮತ-ಭೈರವಮತ-ವೈಷ್ಣವಮತ-ಬೌದ್ಧಮತಗಳನ್ನು ಖಂಡಿಸಿ, ತಿರುಗಿ ಬದರಿಕಾಶ್ರಮಕ್ಕೆ ಹೋಗಿ, ತ್ರೋಟಕಾಚಾರ್ಯರೆಂಬ ತಮ್ಮ ಶಿಷ್ಯರನ್ನು ಆಮಠಾಧಿಕಾರಿಯನ್ನು ಮಾಡಿ ಬಹುದಿವಸ ಅಲ್ಲೇ ವಾಸಮಾಡಿದರು. ಅಲ್ಲಿ ಶ್ರೀದತ್ತಾತ್ರಯನ ದರ್ಶನವನ್ನೂ ಭಾಷ್ಯಾರ್ಥಬೋಧದಿಂದ ಸಂತುಷ್ಟನಾದ ವಿಷ್ಣುವಿನ ದರ್ಶನವನ್ನೂ ತೆಗೆದುಕೊಂಡು, ಮುಂದೆ ಆಚಾರ್ಯರು ಕೈಲಾಸಕ್ಕೆ ತೆರಳಿದರು.

ಶಂಕರಾಚಾರ್ಯರು ಶೃಂಗೇರಿ, ಬದರಿಕಾಶ್ರಮ, ದ್ವಾರಕಾ, ಜಗನ್ನಾಥ ಈ ನಾಲ್ಕು ಸ್ಥಳಗಳಲ್ಲಿ ಒಂದೊಂದು ಮಠವನ್ನು ಸ್ಥಾ

---

* ಚಿದಂಬರವು ಮದ್ರಾಸ ಇಲಾಖೆಯೊಳಗೆ ದಕ್ಷಿಣ ಅರ್ಕಾಟ ಜಿಲ್ಲೆಯಲ್ಲಿ ಒಂದು ತಾಲೂಕಿನ ಊರು ಇರುತ್ತದೆ. ಇಲ್ಲಿರುವ ಕನಕಸಭೆಯೆಂಬ ಶಿವಾಲಯವು ೩೯ ಎಕರೆ ವಿಸ್ತಾರವಾಗಿದ್ದು ನೋಡಲಿಕ್ಕೆ ಬಹುಮನೋಹರವಾಗಿರುತ್ತದೆ. ಅದರ ಶಿಲ್ಪವಿದ್ಯವನ್ನು ನೋಡಿ ಪಾಶ್ಚಿಮಾತ್ಯರು ಬೆರಗಾಗುತ್ತಾರೆ.

‡ ರಾಮೇಶ್ವರವು ಮದ್ರಾಸ ಇಲಾಖೆಯೊಳಗೆ ಮದುರಾ ಜಿಲ್ಲೆಯಲ್ಲಿ ರಾಮನಾಡ ಜಮೀದಾರಿಯೊಳಗೆ ಒಂದು ಸಣ್ಣ ನಡುಗಡ್ಡೆ ಇರುತ್ತದೆ. ಇಲ್ಲಿರುವ ಶ್ರೀರಾಮಸ್ಥಾಪಿತ ಲಿಂಗವುಳ್ಳ ಶಿವಾಲಯವು ಜಗತ್ಪ್ರಸಿದ್ಧವಾಗಿರುತ್ತದೆ. ಈಗುಡಿಯನ್ನು ಕ್ಯಾಂಡಿಯ ಅರಸನಾದ ವರರಾಜಶೇಖರನೆಂಬವನು ಕಟ್ಟಿಸಿದನೆಂದು ಹೇಳುತ್ತಾರೆ. ಈ ಗುಡಿಯ ಪ್ರಾಕಾರವು ೪೦೦೦ ಅಡಿ ಉದ್ದವಿರುತ್ತದೆ. ಇಷ್ಟು ಉದ್ದ ಪ್ರಾಕಾರವು ಯುರೋಪಖಂಡದಲ್ಲಿ ಹೆಸರಾದ ರೋಮಪಟ್ಟಣದಲ್ಲಿರುವ ಸೆಂಟಪೀಟರನ ಗುಡಿಯದಾದರೂ ಇರುವದಿಲ್ಲ. ಈಗುಡಿಗೆ ೫೭ ಹಳ್ಳಿಗಳು ಇನಾಮು ಇದ್ದು ಅವುಗಳ ವಾರ್ಷಿಕೋತ್ಪನ್ನವು ೪೫೦೦೦ ರೂಪಾಯಿ ಇರುತ್ತದೆ.

* ದ್ವಾರಕೆಯು ಕಾಠೆವಾಡ ದ್ವೀಪದಲ್ಲಿರುತ್ತದೆ. ಇದು ಗಾಯಕವಾಡನ ರಾಜ್ಯಕ್ಕೆ ಸೇರಿದ್ದು. ಇದರಲ್ಲಿದ್ದ ದ್ವಾರಕಾನಾಥನ ಗುಡಿಯು ಹೆಸರಾದುದು. ಈಗುಡಿಯ ವಾರ್ಷಿಕೋತ್ಪನ್ನವು ೨೦೦೦ ರೂಪಾಯಿ ಇರುತ್ತದೆ.

ಪಿಸಿದರು.† ಅವರ ಪುಣ್ಯಪ್ರಭಾವದಿಂದಲೇ ಅವು ಈಗಲಾದರೂ ಚೆನ್ನಾಗಿ ನಡೆದಿರುತ್ತವೆ. ಆಚಾರ್ಯರು ನೂರಾರು ಗ್ರಂಥಗಳನ್ನು ಬರೆದರು. ಅವುಗಳೊಳಗೆ ಮುಖ್ಯವಾದ ಮೂರು ಗ್ರಂಥಗಳಿಗೆ ಪ್ರಸ್ಥಾನತ್ರಯವೆನ್ನುತ್ತಾರೆ. ಈಗ್ರಂಥಗಳಾವವೆಂದರೆ:-ಶಾರೀರ ಭಾಷ್ಯ, ಭಗವದ್ಗೀತಾವಿಷ್ಣುಸಹಸ್ರನಾಮಗಳಭಾಷ್ಯ, ಉಪನಿಷದ್ಭಾಷ್ಯ. ಶಾರೀರಭಾಷ್ಯವು ಬಹುಗೌರವದ ಗ್ರಂಥವು. ಇದು ಶ್ರೀ ವೇದವ್ಯಾಸರು ಮಾಡಿದ ಬ್ರಹ್ಮಸೂತ್ರಗಳ ಭಾಷ್ಯವಿದ್ದು, ಇದರಲ್ಲಿ ೧೨೦೦೦ ಗ್ರಂಥಗಳು ಅಂದರೆ ೩೨ ಅಕ್ಷರಗಳುಳ್ಳ ವಾಕ್ಯಗಳಿರುತ್ತವೆ. ಇದರಲ್ಲೇ ಶಂಕರಾಚಾರ್ಯರು ಜೀವಾತ್ಮಪರಮಾತ್ಮರ ಅಭೇದವನ್ನು ಸಿದ್ಧಮಾಡಿ, ಸಾಂಖ್ಯಮತ, ಯೋಗಾಚಾರ್ಯಮತ, ಬೌದ್ಧಮತ ದಿಗಂಬರಮತ, ಚಾರ್ವಾಕಮತ, ಮೀಮಾಂಸಕಮತ, ತಾರ್ಕಿಕಮತ, ಪಾಶುಪತಮತ, ವೈಷ್ಣವಮತ, ಶಾಕ್ತಮತ, ಸೌರಮತ, ಶೈವಮತ, ಗಾಣಾಪತ್ಯಮತ ಮುಂತಾದ ಮತಗಳಲ್ಲಿ ಕಾಲಾಂತರದಿಂದ ಸೇರಿದ ತಪ್ಪು ವಿಚಾರಗಳ ಖಂಡನವ ಮಾಡಿ,

---

† ಮಠಾಮ್ನಾಯವೆಂಬ ಗ್ರಂಥದಲ್ಲಿ ಈ ಸಂಬಂಧದಿಂದ ಬರೆದುದೇನಂದರೆ:-ಶ್ರೀಮಚ್ಛಂಕರಾಚಾರ್ಯರು ತಮ್ಮ ನಾಲ್ಕುಮಂದಿ ಮುಖ್ಯಶಿಷ್ಯರಿಗೆ ನಾಲ್ಕೂ ದಿಕ್ಕಿಗೆ ನಾಲ್ಕು ಮಠಗಳನ್ನು ಮಾಡಿಕೊಟ್ಟರು. ೧ ಮೂಡಲಲ್ಲಿ ಭೋಗವರ್ಧನ ಮಠವು; ಸಂಪ್ರದಾಯು ಭೂರಿಚಾರಿ; ಪದವು ವನ, ಆರಣ್ಯ, ಅಥವಾ ಪುರಿ; ಸ್ಥಾನವು ಬಡ್ಡಿ ಜಗನ್ನಾಥ; ದೇವತೆಯು ಜಗನ್ನಾಥ; ದೇವಿಯು ವಿಮಲಾಕ್ಷಿ ಆದಿ ಸ್ವಾಮಿಗಳು ಹಸ್ತಾಮಲಕಾಚಾರ್ಯರು; ಅಧಿಪತಿಯು ಪ್ರಕಾಶ ಬ್ರಹ್ಮಚಾರಿಯು; ಋಗ್ವೇದ ಪಠನವು; ತೀರ್ಥವು ಮಹೋದಧಿ; ಮಹಾವಾಕ್ಯವಿಚಾರವು 'ಅಯಮಾತ್ಮಾ ಬ್ರಹ್ಮ' ಮುಂತಾದರದು. ೨ ತೆಂಕಲಲ್ಲಿ ಶೃಂಗೇರೀಮಠವು; ಸಂಪ್ರದಾಯವು ಭೋಗವಾರಿ; ಪದವು ಭಾರತೀ, ಸರಸ್ವತೀ ಅಥವಾ ಪುರಿ; ಕ್ಷೇತ್ರವು ರಾಮೇಶ್ವರ; ದೇವತೆಯು ಆದಿವರಾಹ; ಸ್ಥಾನವು ಶೃಂಗಗಿರಿಸ್ಥಾನ; ಆದಿ ಸ್ವಾಮಿಗಳು ಸುರೇಶ್ವರಾಚಾರ್ಯರು; ತೀರ್ಥವು ತುಂಗಭದ್ರಾನದಿ; ಅಧಿಪತಿಯು ಚೈತನ್ಯಬ್ರಹ್ಮಚಾರಿಯು; ಯಜುರ್ವೇದಪಠನವು;

ಈಯೆಲ್ಲ ಮತಗಳನ್ನು ಮಥಿಸಿ, ಪೂರ್ವಕಾಲದಲ್ಲಿ ದೇವತೆಗಳು ಸಮುದ್ರವನ್ನು ಕಡೆದು ಅಮೃತವನ್ನು ತೆಗೆದಂತೆ, ಸ್ಮಾರ್ತಮತವೆಂಬ ಅಮೃತವನ್ನು ಪಂಡಿತಪಾಮರರ ಪ್ರಾಶನಕ್ಕೋಸುಗ ತೆಗೆದಿರುತ್ತಾರೆ. ಈಗಿನ ಜನರು ಅದನ್ನು ಕುಡಿದು ನೋಡದೆ ಅದಕ್ಕೆ ಹುಳಿಯೆಂದು ಹೆಸರಿಟ್ಟರೆ, ಇಸೋಪನ ಕಥೆಯಲ್ಲಿ ಹೇಳಿದ ನರಿಯಂತೆ ಅವರು ಕಲ್ಲಾಯ್ತರ ನಗೆಗೆ ಒಳಗಾಗುವರೆಂಬದಕ್ಕೆ ಸಂಶಯವಿಲ್ಲ.

**ಸ್ಮಾರ್ತಮತ**– **ಶ್ರೀಮಚ್ಛಂಕರಾಚಾರ್ಯರು** ಸ್ಮಾರ್ತಮತವನ್ನು ಸ್ಥಾಪಿಸಿದರು. ಸ್ಮೃತಿಗಳ ಆಧಾರದಿಂದ ಹುಟ್ಟಿದ ಕಾರಣ ಈಮತಕ್ಕೆ ಸ್ಮಾರ್ತಮತವೆನ್ನುತ್ತಾರೆ. ಸ್ಮಾರ್ತರು ಶಿವನೇ ಸರ್ವೋತ್ತಮನೆಂದೆಣಿಸಿ, ಅವನನ್ನು ವಿಶೇಷವಾಗಿ ಆರಾಧಿಸುವುದರಿಂದ ಅವರಿಗೆ ಕೆಲವರು ಶೈವರೆನ್ನುತ್ತಾರೆ. ಆದರೆ ಶಿವೋಪಾಸನೆಯು ಈ ಮತದ ಮುಖ್ಯ-ಭೇದಕ-ಲಕ್ಷಣವಲ್ಲದ್ದರಿಂದ ಸ್ಮಾರ್ತರಿಗೆ ಶೈವರೆಂ

---

ಮಹಾವಾಕ್ಯವಿಚಾರವು 'ತತ್ವಮಸಿ' ಎಂತಾದರದು. ೩ ಪಡುವಲಲ್ಲಿ ಶಾರದಾಮಠವು; ಸಂಪ್ರದಾಯ ಕೀಟವಾದಿ; ಪದವು ವನ, ಅರಣ್ಯ, ಅಥವಾ ಪುರಿ; ಕ್ಷೇತ್ರವು ದ್ವಾರಕಾ; ದೇವತೆಯು ಕೃಷ್ಣ; ದೇವಿಯು ವಿಮಲಾಕ್ಷಿ; ಆದಿಸ್ವಾಮಿಗಳು ಪದ್ಮಪಾದಾಚಾರ್ಯರು; ಅಧಿಪತಿಯು ಪ್ರಕಾಶಬ್ರಹ್ಮಚಾರಿಯು; ಸಾಮವೇದಪಠನವು; ಮಹಾವಾಕ್ಯವಿಚಾರವು 'ತತ್ವಮಸಿ' ಎಂತಾದರದು; ತೀರ್ಥವು ಮಹೋದಧಿಯು. ೪ ಬಡಗಲಲ್ಲಿ ಬದರಿಕಾಶ್ರಮ ಮಠವು; ಸಂಪ್ರದಾಯವು ಆನಂದ-ವಾರಿ, ಪದವು ಗಿರಿ, ಪರ್ವತ, ಅಥವಾ ಸಾಗರ; ದೇವತೆಯು ಬದರೀನಾರಾಯಣ; ದೇವಿಯು ಪೂರ್ಣಗಿರಿದೇವಿ; ಆದಿಸ್ವಾಮಿಗಳು ತಂತ್ರೋಟಕಾಚಾರ್ಯರು; ಅಧಿಪತಿಯು ಆನಂದಬ್ರಹ್ಮಚಾರಿ; ಅಥರ್ವಣವೇದಪಠನವು, ಮಹಾವಾಕ್ಯವಿಚಾರವು 'ತತ್ವಮಸಿ' ಎಂತಾದರದು. ಇತ್ಯಲಾಗಿ ಶೃಂಗೇರಿಯು ಮಠಕ್ಕೆ ಸೇರಿದ ೭ ಮಠಗಳು ಸ್ವತಂತ್ರವಾಗಿರುತ್ತವೆ. ಅವು ಇರುವ ಸ್ಥಳಗಳಾವವೆಂದರೆ:- ಹಂಪಿ, ಪುಷ್ಪಗಿರಿ, ಕೂಡಲಗಿ, ಸಂಕೇಶ್ವರ, ಆವಣಿ, ಕುಂಭಕೋಣ, ಶ್ರೀಶೈಲ.

ಬದು ಸರಿಯಲ್ಲ.* **ಶ್ರೀಮದಾಚಾರ್ಯರು** ಜೀವಾತ್ಮ ಪರಮಾತ್ಮರಲ್ಲಿ ನೈಸರ್ಗಿಕ ಭೇದವಿಲ್ಲೆಂತಲೂ ಬ್ರಹ್ಮಜ್ಞಾನದಿಂದ ಮಾಯಾಂಧಕಾರವನ್ನು ತೊಲಗಿದ ಪರಿಶುದ್ಧವಾದ ಜೀವಾತ್ಮವು ಪರಮಾತ್ಮಸ್ವರೂಪವನ್ನೈದಿ, ಅವನಲ್ಲಿ ಐಕ್ಯಹೊಂದುವದೆಂತಲೂ ತಮ್ಮ ಹೆಸರಾದ ಶಾರೀರಕಭಾಷ್ಯವೆಂಬ ದೊಡ್ಡ ವೇದಾಂತಗ್ರಂಥದಲ್ಲಿ ಸಪ್ರಮಾಣವಾಗಿ ಸಿದ್ಧಮಾಡಿದ್ದರಿಂದ ಅವರ ಮತಕ್ಕೆ ಅದ್ವೈತಮತವೆಂತಲೂ ಅನ್ನುತ್ತಾರೆ.

ಆಚಾರ್ಯರ ಕಾಲಕ್ಕೆ ಸಮಸ್ತ ಭರತಖಂಡದಲ್ಲೆಲ್ಲಾ ಬೌದ್ಧಧರ್ಮವು ವಿಶೇಷವಾಗಿ ಹಬ್ಬಿತ್ತು. ಆಧರ್ಮದ ಹೆಚ್ಚಿನ ಮುಕ್ತಿಯೆಂದರೆ ಈಜನ್ಮದಲ್ಲೇ ದೊರೆಯ ಬಹುದಾದ ನಿರ್ವಾಣವು. ಶ್ರೀಮದಾಚಾರ್ಯರ ಮನಸ್ಸಿನಲ್ಲಿ ಈಧರ್ಮವನ್ನು ಕುಗ್ಗಿಸಿ, ವೇದಧರ್ಮವನ್ನು ಹೆಚ್ಚು ನೆಲೆಗೊಳಿಸುವದಿತ್ತು. ಅದ್ದರಿಂದ ಅವರು ಶ್ರುತಿಸ್ಮೃತಿಗಳನ್ನು ಚೆನ್ನಾಗಿ ಪರಿಶೋಧಿಸಿ, ಅದರಿಂದ ಹೊರಟ ಅದ್ವೈತಮತವೆಂಬ ಸುಧೆಯನ್ನು ಭಾರತೀಯ ಜ್ಞಾನಿಗಳಿಗೆ ಕುಡಿಸಿದರು. ಈಮತದ ಜೀವಾತ್ಮಪರಮಾತ್ಮೈಕ್ಯವು ಬೌದ್ಧಮತದ ನಿರ್ವಾಣವನ್ನು ಹೋಲುವದರಿಂದ† ಬೌದ್ಧಶ್ರಮಣರು ಒಬ್ಬರಹಿಂದೊಬ್ಬರು ಇದಕ್ಕೆ ತಲೆದೂಗಲಾರಂಭಿಸಿದರು. ಎಲ್ಲ ಮತಗಳ ಸಂ

---

* ಶಂಕರಾಚಾರ್ಯರು ಸೌರರೂ ಶಾಕ್ತರೂ ಗಾಣಪತ್ಯರೂ ವೈಷ್ಣವರೂ ಶೈವರೂ ಪೂಜಿಸುವ ದೇವರು ಒಬ್ಬನೇ ಇರುತ್ತಾನೆಂದು ಪ್ರತಿಪಾದಿಸಿದರು.

ಸೌರಾಃ ಶೈವಾಶ್ಚ ಗಾಣೇಶಾ ವೈಷ್ಣವಾಃ ಶಕ್ತಿಪೂಜಕಾಃ ।
ಮಾಮೇವ ಪ್ರಾಪ್ನುವಂತ್ಯದ್ಧಾ ವರ್ಷಾಣಾಃ ಸಾಗರಂ ಯಥಾ॥

ಈವಚನವು ಪದ್ಮಪುರಾಣ ಲಿಂಗಪುರಾಣ ಸ್ಕಂಧಪುರಾಣ ಮುಂತಾದವುಗಳಲ್ಲಿರುತ್ತದೆ. ಅದ್ದರಿಂದ ಶಂಕರಾಚಾರ್ಯರು ಶೈವಮತಸ್ಥಾಪಕರೆಂಬುದು ತಪ್ಪುತಿಳಿವಳಿಕೆಯೆನ್ನಲಿಕ್ಕೆ ಏನೂ ಅಡ್ಡಿಯಿಲ್ಲ.

† ಹಿಂದೆ ಗೌತಮಬುದ್ಧನ ಚರಿತ್ರವನ್ನು ನೋಡಿರಿ.

ಡಿತರೂ ಈಯದ್ವೈತಮತಕ್ಕೆ ಮೆಚ್ಚಿದರೂ, ಕಡಮೆಯು ಪ್ರತಿಯ ಜನರಿಗೆ ಇದು ತಿಳಿಯದಂತಾಯಿತು. ಆದ್ದರಿಂದ ಶ್ರೀಮದಾಚಾರ್ಯರು ಅದ್ವೈತಮತವೆಂಬ ಮೇಲುಪ್ಪರಿಗೆಗೆ ಸೋಪಾನಮಾರ್ಗದಂತೆ ಸಾಧನವಾದ ಮತ್ತು ಕಡಮೆಯ ಪ್ರತಿಯ ಜನರ ತಿಳಿವಳಿಕೆಗೆ ತಕ್ಕುದಾದ ಸಾಧಾರಣ ಹಿಂದೂಧರ್ಮವನ್ನು ಬೋಧಿಸಿದರು. ಇದರಿಂದ ನಿರಾಕಾರದೇವರನ್ನು ಭಜಿಸುವ ಯೋಗ್ಯತೆಯು ಬರುವವರೆಗೆ ಕಡಮೆಪ್ರತಿಯ ಜನರು ಬ್ರಹ್ಮ ವಿಷ್ಣು ಮಹೇಶ್ವರ ಗಣಪತಿ ಮುಂತಾದ ಸಾಕಾರದೇವತೆಗಳನ್ನು ಪೂಜಿಸಬಹುದೆಂತಲೂ ವೇದೋಕ್ತ-ಹವ್ಯಕವ್ಯಹೋಮಹವನ ಮುಂತಾದವುಗಳನ್ನು ಅದೇ ಉದ್ದೇಶದಿಂದ ಮಾಡಬಹುದೆಂತಲೂ ಉಪದೇಶಿಸಿದರು. ಇಂತು ಶಂಕರನೆಂಬ ಕಿರಾತನು ಇಚ್ಛಾಗವಾದ ವೇದಧರ್ಮವೆಂಬ ಜೋಡುನಳಿಗೆಯ ಬಂದೂಕಿನಲ್ಲಿ ತನ್ನ ಅತಿಶಯಿತ ಪರೋಪಕಾರೇಚ್ಛೆಯೆಂಬ ಮದ್ದನ್ನು ತುಂಬಿ, ತನ್ನ ಅಮಾನುಷಜ್ಞಾನವೆಂಬ ಗುಂಡನ್ನು ಜಡೆದು, ತನ್ನ ಅಮೃತತುಲ್ಯವಾದ ಉಪದೇಶವಾಕ್ಯವೆಂಬ ಚರಿಗಳನ್ನು ಹಾರಿಸಿ, ತಪ್ಪು ತಿಳಿವಳಿಕೆಯುಳ್ಳ ಬೌದ್ಧಮತ ಮುಂತಾದ ಪಕ್ಷಿಗಳನ್ನು ಹೊಡೆದು ಕೆಡವಿ, ಜಗದ್ಗುರುವೆಂಬ ಗೌರವದ ಬಿರುದನ್ನು ಪಡೆದು, ಶೈವ-ವೈಷ್ಣವ-ಸೌರ-ಶಾಕ್ತ-ಗಾಣಪತ್ಯ-ಸ್ಮಾರ್ತವೆಂಬ ಮತಗಳನ್ನು ನೆಲೆಗೊಳಿಸಿ, ಷಣ್ಮತಸ್ಥಾಪನಾಚಾರ್ಯರೆಂದು* ಪ್ರಸಿದ್ಧಹೊಂದಿ, ತನ್ನ ಅಪೂರ್ವವಾದ ವೇದಾಂತಗ್ರಂಥದ ಸಂಬಂಧದಿಂದ ಹಿಂದೂ ಜನರಿಂದಿಷ್ಟೇ ಅಲ್ಲ, ಆದರೆ ಯುರೋಪಿಯರಿಂದಲೂ ಅಮೇರಿಕೆಯರಿಂದಲೂ ಈಗಲೂ ಹೊಗಳಿಸಿಕೊಳ್ಳುತ್ತಾನೆ.

---

* ಶಂಕರಾಚಾರ್ಯರ ಕಾಲಕ್ಕಿಂತ ಮೊದಲು ಸೌರಮತ, ಶೈವಮತ, ವೈಷ್ಣವಮತ, ಗಾಣಪತ್ಯಮತ, ಶಾಕ್ತಮತ ಹೀಗೆ ೫ ವೇದಪ್ರಣೀತಮತಗಳಿದ್ದವು. ಶಂಕರಾಚಾರ್ಯರು ಇವಯ್ದೂ ಮತಗಳು ಸರಿಯಾದವೆಂದು ಪ್ರತಿಪಾದಿಸಿದ್ದಲ್ಲದೆ, ಇವೆಲ್ಲವುಗಳನ್ನು ಒಟ್ಟುಗೂಡಿಸಿ, ಸ್ಮಾರ್ತಮತವೆಂಬದೊಂದು ಹೊಸ ಮತವನ್ನು ಸ್ಥಾಪಿಸಿದರು.



# ರಾಮಾನುಜಾಚಾರ್ಯರು.

ಶ್ರೀಮಚ್ಛಂಕರಾಚಾರ್ಯರು ನೆಲೆಗೊಳಿಸಿದ ಸ್ಮಾರ್ತಮತವು ಇಡಿ ಹಿಂದುಸ್ತಾನ ದೇಶದಲ್ಲಿ ಹಬ್ಬಿಕೊಂಡಿರುವಾಗ ಹೊಸ ವೈಷ್ಣವ- ಮತವು ತಲೆದೋರ ಹತ್ತಿತು. ಈಮತವನ್ನು ಎಲ್ಲಕ್ಕೂ ಮೊದಲು ಬೋಧಿಸಿದವರು ರಾಮಾನುಜಾಚಾರ್ಯರು. ಇವರು ಎಂದು ಹುಟ್ಟಿದರೆಂಬದು ದಿಟವಾಗಿ ತಿಳಿಯುವದಿಲ್ಲ. ಆದರೆ ಇವರನ್ನು ೧೧ನೆಯ ಶತಕದ ಆರಂಭದೊಳಾಳುತ್ತಿದ್ದ ಕರಿಕಾಳ ಚೋಳ ರಾಜನು ಸ್ಮಾರ್ತಮತಾಭಿಮಾನದಿಂದ ಬಹಳವಾಗಿ ಅಳುಕಿಸಿದನೆಂದು ಶಿಲಾಲೇಖಗಳಿಂದ ತಿಳಿಯುತ್ತದೆ. ಆದ್ದರಿಂದ ಇವರು ೧೧ನೆಯ

ಶತಕದ ಕೊನೆಯಲ್ಲಿ ಹುಟ್ಟಿದರೆಂದು ಅನುಮಾನ ಮಾಡಬಹುದು. ಇವರು ಹುಟ್ಟಿದ ಸ್ಥಳವು ಮದ್ರಾಸದ ಸೆರೆಯಲ್ಲಿದ್ದ ಶ್ರೀಪೆರ್ಮಟೂರು.†

ರಾಮಾನುಜಾಚಾರ್ಯರು ತಮ್ಮ ಉಪನಯನವಾದ ಬಳಿಕ ಕಂಚಿಗೆ (ಕಂಜೀವರಮ್ಮಕ್ಕೆ) ಹೋಗಿ ಅಲ್ಲಿ ಅಧ್ಯಯನಮಾಡ ತೊಡಗಿದರು. ಅಲ್ಲಿರುವಾಗಲೇ ಇವರು ತಮ್ಮ ಆಯುಷ್ಯವನ್ನು ಪರೋಪಕಾರದಲ್ಲಿ ಕಳೆಯ ಬೇಕೆಂದು ನಿಶ್ಚಯಿಸಿ, ಶ್ರೀರಂಗಕ್ಕೆ* ಹೋಗಿ, ಅಲ್ಲಿ ಸನ್ಯಾಸಾಶ್ರಮವನ್ನು ತೆಗೆದುಕೊಂಡು, ಮುಕ್ತಿಯ ನಿಜವಾದ ಮಾರ್ಗವನ್ನು ಹುಡುಕ ತೊಡಗಿದರು. ಮುಂದೆ ಕೆಲವು ಕಾಲದ ಮೇಲೆ ತಮ್ಮ ಮತದ ತತ್ವಗಳನ್ನು ಗೊತ್ತುಮಾಡಿ ಅವುಗಳನ್ನು ಜನರಿಗೆ ಬೋಧಿಸಲಿಕ್ಕೆ ಹೊರಟರು.

ಈಕಾಲಕ್ಕೆ ಶಂಕರಾಚಾರ್ಯರಿಂದ ಸ್ಥಾಪಿತವಾದ ಸ್ಮಾರ್ತಮತವು ಕಳೆಗುಂದುತ್ತಾ ಬಂದಿತ್ತೆನ್ನಲಿಕ್ಕೆ ಅಡ್ಡಿಯಿಲ್ಲ. ಏಕೆಂದರೆ ಆ ಮತದವರು ಒಬ್ಬರಹಿಂದೊಬ್ಬರು ರಾಮಾನುಜಾಚಾರ್ಯರ ಮತವನ್ನು ಸ್ವೀಕರಿಸಲಾರಂಭಿಸಿದರು. ಆದ್ದರಿಂದ ಅವರು ಅಹೋಬಲದಲ್ಲಿಯೊಂದು‡ ಮುಖ್ಯಮಠವನ್ನು ಸ್ಥಾಪಿಸಿದ್ದಲ್ಲದೆ, ಎಷ್ಟೋ ಕೈವಡೇ

---

† ಶ್ರೀಪೆರ್ಮಟೂರು ಮದ್ರಾಸ ಇಲಾಖೆಯೊಳಗೆ ಚೆಂಗಲ್ಪೇಟ ಜಿಲ್ಲೆಯಲ್ಲಿ ಕಂಚಿ ತಾಲೂಕಿನೊಳಗೆ ಒಂದು ಹಳ್ಳಿಯಾಗಿರುತ್ತದೆ. ರಾಮಾನುಜಾಚಾರ್ಯರು ಹುಟ್ಟಿದ ಮನೆಯಲ್ಲಿ ಅವನ ಶಿಷ್ಯರು ಒಂದು ಕಲ್ಲುಗುಡಿಯನ್ನು ಕಟ್ಟಿಸಿರುತ್ತಾರೆ.

* ಶ್ರೀರಂಗವು ಮದ್ರಾಸ ಇಲಾಖೆಯೊಳಗೆ ತ್ರಿಚಿನಾಪಳ್ಳಿ ಜಿಲ್ಲೆಯಲ್ಲಿ ಕಾವೇರೀ ಕೊಲರೂನ ಹೊಳೆಗಳ ಸಂಗಮದಲ್ಲಿಯೊಂದು ಪಟ್ಟಣವಿದೆ, ಇಲ್ಲಿದ್ದ ವಿಷ್ಣುದೇವಾಲಯವು ದಕ್ಷಿಣದಲ್ಲಿ ಹೆಸರಾಗಿರುತ್ತದೆ.

‡ ಅಹೋಬಲವು ಮದ್ರಾಸ ಇಲಾಖೆಯೊಳಗೆ ಕರ್ನೂಲ ಜಿಲ್ಲೆಯಲ್ಲಿಯೊಂದು ಸಣ್ಣಹಳ್ಳಿಯಿದೆ. ಇಲ್ಲಿಯೊಂದು ಮರಡಿಯ ಮೇಲೆ ೯ ಗುಡಿಗಳಿವೆ.

ವಾಲಯಗಳಲ್ಲಿ ವಿಷ್ಣುವಿನ ಮೂರ್ತಿಯನ್ನು ಸ್ಥಾಪಿಸಿದರು.† ಈಗುಡಿಗಳಲ್ಲಿ ಹೆಸರಾದ ತಿರುಪತಿಯ‡ ಗುಡಿಯೇ ಮುಖ್ಯವಾದುದು.

ಇಂತು ತಮ್ಮ ಮತವನ್ನು ಬೆಳಸಿ, ರಾಮಾನುಜಾಚಾರ್ಯರು ಮರಳಿ ಶ್ರೀರಂಗಕ್ಕೆ ಬಂದರು. ಆಕಾಲಕ್ಕೆ ಈಪ್ರಾರು ಕರಿಕಾಳ ಚೋಳನ ರಾಜ್ಯಕ್ಕೆ ಸೇರಿತ್ತು. ಆಅರಸನು ಇವರ ವೈಷ್ಣವಮತದ ಸುದ್ದಿಯನ್ನು ಕೇಳಿ, ಅದು ತನ್ನ ರಾಜ್ಯದಲ್ಲಿ ಸೇರಬಾರದೆಂಬುದ್ದೇಶದಿಂದ ಇವರನ್ನು ಪರಿಪರಿಯಾಗಿ ಕಾಡತೊಡಗಿದನು (೧೧೧೭). ಅವನ ಉಪಟಲವನ್ನು ತಾಳಲಾರದೆ, ಇವರು ಅವನ ನಾಡನ್ನು ತೊರೆದು, ಬಲ್ಲಾಳರಸರ ರಾಜಧಾನಿಯಾದ ಬೇಲೂರಿಗೆ* ಹೋದ

---

† ಇವರು ತಮ್ಮ ಮತವನ್ನು ಕಲಿಸಲಿಕ್ಕೆ ೬೦೦ ವಿದ್ಯಾಲಯಗಳನ್ನೂ ತಮ್ಮ ಮತಸ್ಥರ ಧರ್ಮಾಚರಣದ ವ್ಯವಸ್ಥೆಗಾಗಿ ೮೯ ಮಠಗಳನ್ನೂ ಸ್ಥಾಪಿಸಿದರು. ಈಮಠಗಳಲ್ಲಿ ಕಂಚಿ-ಶ್ರೀರಂಗ-ರಾಮೇಶ್ವರ-ತೋತಾದ್ರಿ-ಅಹೋಬಲಗಳೆಂಬಲ್ಲಿಯ ಮಠಗಳು ಇನ್ನೂ ನಡೆಯುತ್ತವೆ.

‡ ತಿರುಪತಿಯು ಮದ್ರಾಸ ಇಲಾಖೆಯೊಳಗೆ ಬಡಗಣ ಅರ್ಕಾಟ ಜಿಲ್ಲೆಯಲ್ಲಿ ಚಂದ್ರಗಿರಿ ತಾಲೂಕಿನೊಳಗೆ ಒಂದು ಪಟ್ಟಣವಿರುತ್ತದೆ. ಇದರಿಂದ ೬ ಮೈಲಿನ ಮೇಲಿರುವ ತಿರುಮಲೆಯೆಂಬ ಗುಡ್ಡದ ಮೇಲೆ ದಕ್ಷಿಣದೇಶದಲ್ಲಿ ಹೆಸರಾದ ವೆಂಕಟರಮಣ-ದೇವಾಲಯವಿರುತ್ತದೆ. ಈಗುಡಿಯಲ್ಲಿ ೧೮೩೨ರ ವರೆಗೆ ಇಂಗ್ಲಿಷರ ಪ್ರವೇಶವಿದ್ದಿಲ್ಲ. ೧೮೪೩ರ ವರೆಗೆ ಈಗುಡಿಯ ವ್ಯವಸ್ಥೆಯು ಬ್ರಿಟಿಶ್ ಸರಕಾರದವರ ಕಯ್ಯಲ್ಲೇ ಇತ್ತು. ಆಗ ಗುಡಿಗೆ ಪ್ರತಿವರ್ಷ ೨,೦೦,೦೦೦ ರೂಪಾಯಿ ಉಳಿತಾಯವಾಗುತ್ತಿತ್ತು. ಆದರೆ ಇತ್ತಲಾಗಿ ಗುಡಿಯ ವ್ಯವಸ್ಥಾಪಕನಾದ ಮಹಂತನು ೬೫೦೦೦ ರೂಪಾಯಿ ಮಾತ್ರ ಉಳಿಯುತ್ತದೆಂದು ಹೇಳುತ್ತಾನೆ.

* ಬೇಲೂರು ಮೈಸೂರು ಸಂಸ್ಥಾನದೊಳಗೆ ಹಸನ ಜಿಲ್ಲೆಯಲ್ಲಿ ಒಂದು ತಾಲೂಕಿನ ಊರಾಗಿರುತ್ತದೆ. ಇದರ ಪೌರಾಣಿಕ ಹೆಸರು ವೇಲಾಪುರ. ಇದಕ್ಕೆ ಈಗ ದಕ್ಷಿಣವಾರಣಾಸಿಯೆಂದು ಕರೆಯುತ್ತಾರೆ. ಬಲ್ಲಾಳರಸನು ಜಕಣಾಚಾರ್ಯರಿಂದ ಇಲ್ಲಿ ಕಟ್ಟಿಸಿದ ಚೆನ್ನಕೇಶವನ ಗುಡಿಯು ಹೆಸರಾಗಿದೆ.

ರು. ಅಲ್ಲಿಯರಸನಾದ ತ್ರಿಭುವನಮಲ್ಲನೆಂಬ ಬಿರುದುಳ್ಳ ವಿಷ್ಣುವರ್ಧನನೆಂಬ ಜೈನನು (೧೧೧೪-೧೧೪೫) ಈಯಾಚಾರ್ಯರ ಮತವನ್ನು ಸ್ವೀಕರಿಸಿದ ಬಗ್ಗೆ ಎರಡು ಕಥೆಗಳುಂಟು, ಅವಾವವೆಂದರೆ:-

೧. ರಾಮಾನುಜಾಚಾರ್ಯರು ಬೇಲೂರಿಗೆ ಹೋದಾಗ ವಿಷ್ಣುವರ್ಧನನ ಮಗಳಿಗೆ ದೆವ್ವ ಬಡಿದಿತ್ತು. ಏನುಪಾಯಮಾಡಿದರೂ ಆಕೆಗೆ ನೆಟ್ಟಗಾಗದ್ದರಿಂದ, ವಿಷ್ಣುವರ್ಧನನು ರಾಮಾನುಜಾಚಾರ್ಯರನ್ನು ಕರಿಸಿ, ತನ್ನ ಮಗಳನ್ನು ನೆಟ್ಟಗೆ ಮಾಡಿದರೆ ತಾನು ಅವರ ಮತವನ್ನು ಸ್ವೀಕರಿಸುವೆನೆಂದು ಹೇಳಿದನು. ಅವರು ಅದಕ್ಕೊಡಂಬಟ್ಟು, ದೆವ್ವ ಬಿಡಿಸಿದರು. ಮೊದಲು ಮಾತುಕೊಟ್ಟಂತೆ ವಿಷ್ಣುವರ್ಧನನು ಅವರ ಮತವನ್ನು ಸ್ವೀಕರಿಸಿದ್ದಲ್ಲದೆ, ಒಂದು ಸಭೆಗೂಡಿಸಿ, ಅವರಿಗೂ ಜೈನರಿಗೂ ವಾದವಾಗಬೇಕೆಂದು ಗೊತ್ತು ಮಾಡಿದನು. ಈವಾದವು ೧೮ ದಿವಸ ನಡೆದು, ಕಡೆಗೆ ಜೈನರು ಸೋತುದರಿಂದ ಅವರಲ್ಲೆಷ್ಟೋ ಮಂದಿ ವೈಷ್ಣವರಾದರು. ಉಳಿದವರನ್ನು ಅರಸನು ಕಣ್ಗಾಣದೊಳಗೆ ಹಾಕಿಸಿ ಕೊಲ್ಲಿಸಿದನಂತೆ.

೨. ವಿಷ್ಣುವರ್ಧನನ ಹೆಂಡಂದಿರಲ್ಲೊಬ್ಬಳು ವೈಷ್ಣವಳಿದ್ದಳು. ಆಕೆಯು ತನ್ನ ಗಂಡನನ್ನು ಜೈನರ ಮೇಲೆ ಸಿಟ್ಟಿಗೆಬ್ಬಿಸಲಿಕ್ಕೆ ಒಂದು ಹಂಚಿಕೆತೆಗೆದಳು. ಅದೇನಂದರೆ, ವಿಷ್ಣುವರ್ಧನನ ಒಂದು ಬೆರಳು ಮೊಂಡವಾಗಿತ್ತು; ಆದಕಾರಣ ಜೈನರು ಅವನೊಡನೆ ಊಟ ಮಾಡುತ್ತಿದ್ದಿಲ್ಲ. ಆದ್ದರಿಂದ ಆಕೆಯು ಅವನಿಗೆ ಹೇಳಿದ್ದೇನಂದರೆ:- ಜೈನರು ತಮ್ಮನ್ನು ಸೇರುವದಿಲ್ಲ, ಮತ್ತು ತಮಗೆ ಅವಮಾನಮಾಡುವ ಉದ್ದೇಶದಿಂದ ಅವರು ತಮ್ಮ ಪಂಕ್ತಿಯಲ್ಲಿ ಊಟ ಸಹ ಮಾಡುವದಿಲ್ಲ, ಇದನ್ನರಿತು ತಾವು ಅವರ ಮೇಲೆ ಪ್ರೀತಿಮಾಡುವದು ಸೋಜಿಗವೇ ಸರಿ. ಆಕೆಯ ಈ ಮರ್ಮಭೇದಕವಾದ ಮಾತನ್ನು ಕೇಳಿ, ವಿಷ್ಣುವರ್ಧನನು ಅದನ್ನು ಪ್ರತ್ಯಕ್ಷಿಸಿ ನೋಡಬೇಕೆಂದು ಒಂದುದಿನ ಮುಖ್ಯರಾದ ಜೈನರನ್ನು ಊಟಕ್ಕೆ ಕರೆದನು. ಆಗ ತನ್ನ ಹೆಂಡತಿಯು ಹೇಳಿದಂತೆ ಅವರಾರೂ ಊಟಕ್ಕೆ ಬರಲಿಲ್ಲ. ಆದ್ದರಿಂದ ಅವನು ಸಿಟ್ಟುಬೆಂಕಿಯಾಗಿ ವೈಷ್ಣವಮತವನ್ನು ಸ್ವೀಕರಿಸಿ, ರಾಮಾನುಜಾಚಾರ್ಯರಿಗೆ ಆಶ್ರಯಕೊಟ್ಟನು. ಮುಂದೆ ಇವರು ಬೇಲೂರಿನಲ್ಲಿದ್ದ ೭೨೦ ಜೈನರ ಗುಡಿಗಳನ್ನು ಕೆಡಿಸಿ, ಅವುಗಳ ಕಲ್ಲಿನಿಂದ ಒಂದು ದೊಡ್ಡ ಕೆರೆಯನ್ನು ಕಟ್ಟಿಸಿದರಂತೆ.

ಈ ಸೆರಡು ಕಥೆಗಳಲ್ಲಿ ಯಾವದೇ ನಿಜವಿರಲಿ, **ವಿಷ್ಣುವರ್ಧನನು** ವೈಷ್ಣವಮತವಿಡಿದು (೧೧೧೩), **ರಾಮಾನುಜಾಚಾರ್ಯರಿಗೆ** ಆಶ್ರಯಕೊಟ್ಟದಲ್ಲದೆ **ಶ್ರೀರಂಗಪಟ್ಟಣವನ್ನೂ** ಅದರ ನೆರೆಸೀಮೆಯನ್ನೂ ಆ ಆಚಾರ್ಯರಿಗೆ ಉಂಬಳಿ ಹಾಕಿಕೊಟ್ಟನು (೧೧೩೩). ಮುಂದೆ ಅವರು **ಮೇಲುಕೋಟೆಯಲ್ಲಿ†** ತಮ್ಮ ಗದ್ದಿಗೆಯನ್ನು ಸ್ಥಾಪಿಸಿ, ಅಲ್ಲಿ ಕೆಲವು ವರ್ಷ ನಿಂತು ಮತ್ತೆ **ಶ್ರೀರಂಗಕ್ಕೆ** ಹೋಗಿ (೧೧೯೨), ಅಲ್ಲಿ ತಮ್ಮ ಉಳಿದ ಆಯುಸ್ಸನ್ನು ಕಳೆದರು. ಇವರು ಎಂದು ಸ್ವರ್ಗಸ್ಥರಾದರೆಂಬದೂ ತಿಳಿಯುವದಿಲ್ಲ.

**ರಾಮಾನುಜಾಚಾರ್ಯರ ಮತವು**-ರಾಮಾನುಜಾಚಾರ್ಯರು ವೇದಾಂತಸೂತ್ರಗಳು ಅಥವಾ ಶಾರೀರಕಭಾಷ್ಯವೆಂಬ ತಮ್ಮ ಗ್ರಂಥದಲ್ಲಿ ತಮ್ಮ ಮತದ ತತ್ವಗಳನ್ನು ವಿವರಿಸಿರುತ್ತಾರೆ. ಅವರ ಅಭಿಪ್ರಾಯದಂತೆ ವಿಷ್ಣುವೇ ಪರಬ್ರಹ್ಮನು; ಅವನೇ ಜಗತ್ತಿನ ಕಾರಣನೂ ಕರ್ತನೂ; ಆದರೆ ಶಂಕರಾಚಾರ್ಯರು ಬೋಧಿಸಿದಂತೆ ಅವನು ನಿರ್ಗುಣನೂ ನಿರಾಕಾರನೂ ಅಲ್ಲ. ಅವನಲ್ಲಿ ಎಲ್ಲ ಸದ್ಗುಣಗಳು ನೆಲೆಗೊಂಡಿರುತ್ತವೆ. ಅವನ ಸ್ವರೂಪಗಳು ಮೂರು— ಪರಮಾತ್ಮಸ್ವರೂಪ, ಚಿತ್ (ಜೀವ), ಅಚಿತ್ (ನಿರ್ಜೀವ). ‡

---

† ಮೇಲುಕೋಟೆಯು ಮೈಸೂರು ಸಂಸ್ಥಾನದೊಳಗೆ ಹಸನ ಜಿಲ್ಲೆಯಲ್ಲಿ ಅತ್ತಿಕುಪ್ಪ ತಾಲೂಕಿನೊಳಗೆ ಒಂದು ಶ್ರೀವೈಷ್ಣವರ ಪವಿತ್ರ ಸ್ಥಾನವಿರುತ್ತದೆ. ರಾಮಾನುಜಾಚಾರ್ಯರು ಕರಿಕಾಳನ ರಾಜ್ಯದಿಂದೋಡಿ ಬಂದು, ಇಲ್ಲಿ ೧೪ ವರ್ಷ ವಾಸಮಾಡಿದರು. ೧೩೩೧ರಲ್ಲಿ ದ್ರವ್ಯಲೋಭಿಗಳಾದ ಮರಾಟರು ಈ ಪೂರನ್ನು ಸುಲಿದರು. ಇಲ್ಲಿರುವ ಚೆಲುವಪಳ್ಳೆರಾಯನ ಗುಡಿಯು ಮೈಸೂರ ಮಹಾರಾಜನ ವಶದಲ್ಲಿದೆ. ಇದರ ನೆರೆಯಲ್ಲಿ ಶ್ರೀವೈಷ್ಣವರು ಹಚ್ಚುವ ಬಿಳಿಮಟ್ಟಿಯು ವಿಪುಲವಾಗಿ ದೊರೆಯುತ್ತದೆ. ಈ ಊರಲ್ಲಿ ತರತರದ ಅರಿವೆಗಳೂ ಬಾಳದ ಜೀನಸುಗಳೂ ಆಗುತ್ತವೆ.

‡ ಶಾರೀರಕಭಾಷ್ಯದಲ್ಲಿ ಆಚಾರ್ಯರು ಹೇಳುವದೇನಂದರೆ:— ಯಾವತ್ತೂ ಶಾಸ್ತ್ರಗಳು ಎರಡು ತತ್ವಗಳನ್ನು ಪ್ರತಿಪಾದಿಸುತ್ತವೆ. ಜ್ಞಾನ, ಅಜ್ಞಾನ; ಸದ್ಗುಣ, ದುರ್ಗುಣ; ಸತ್ಯ, ಅಸತ್ಯ. ಎಲ್ಲಕಡೆಯಲ್ಲಿಯೂ ಜೋಡಿಗಳು ಇರುವಂತೆ ಪರಮಾತ್ಮ-ಜೀವಾತ್ಮವೆಂಬ

ಪರಮಾತ್ಮಸ್ವರೂಪ–ಈಮತವು ಶಂಕರಾಚಾರ್ಯರ ಮತದಿಂದ ತುಸು ಭಿನ್ನವಾದ್ದರಿಂದ ಇದಕ್ಕೆ ವಿಶಿಷ್ಟಾದ್ವೈತಮತವೆನ್ನು ಲ್ಲಿಯಾದರೂ ಜೋತಿ ಇರುತ್ತದೆ. ಅವು ಒಂದೇ ಆಗಲಿಕ್ಕೆ ಮಾರ್ಗವೇ ಇಲ್ಲ. ನಾನು ಒಮ್ಮೆ ಸಂತೋಷಿಯಾಗಿರುತ್ತೇನೆ ಮತ್ತು ಒಮ್ಮೆ ದುಃಖಿಯಾಗಿರುತ್ತೇನೆ. ಆದರೆ ಪರಮಾತ್ಮನು ಹಾಗಲ್ಲ; ಅವನು ಆವಾಗಲೂ ಸುಖಿಯಾಗಿರುತ್ತಾನೆ. ಇದೇ ಭೇದಕಲಕ್ಷಣವು. ಹೀಗೆ ಭಿನ್ನವಾದ ಪದಾರ್ಥಗಳು ಒಂದೇ ಆಗುವ ಬಗೆ ಹೇಗೆ? ಪರಮಾತ್ಮನು ಪರಂಜ್ಯೋತಿಯೂ ಸೃಷ್ಟಿನಿಯಾಮಕನೂ ಆಗಿರುತ್ತಾನೆ. ಆದರೆ ಜೀವಾತ್ಮನು ಹಾಗಲ್ಲ. ಈವೈಲಕ್ಷಣ್ಯವು ಅದ್ವೈತವೆಂಬ ವೃಕ್ಷದ ಮೇಲೆ ಸಿಡಿಲಿನಂತೆ ಬೀಳುತ್ತದೆ. ಎಲೋ ಜಡಬುದ್ಧಿಯೇ ಪೂರ್ಣಸೃಷ್ಟಿಯನ್ನು ನಿರ್ಮಿಸಿದ ಪರಮಾತ್ಮನಿಗೆ ನೀನು ಎಂತು ಸರಿಯಾಗುವೇ? ನಿಷ್ಪಕ್ಷಪಾತ ಬುದ್ಧಿಯಿಂದ ನಿನ್ನ ನಿಜವಾದ ಯೋಗ್ಯತೆಯನ್ನು ವಿಚಾರಿಸು. ಸರ್ವಶಕ್ತನಾದ ದೇವರು ನಿನ್ನ ಮೇಲೆ ದಯವಿಟ್ಟು, ನಿನಗೆ ಅಲ್ಪಮತಿಯನ್ನು ಕೊಟ್ಟಿರುತ್ತಾನೆ; ಆದಕಾರಣ ಎಲೋ ದುರ್ಬುದ್ಧಿಯೇ ನಾನೇ ದೇವರೆನ್ನುವದು ನಿನಗೆ ಸಲ್ಲದು. ಸಾರ್ವಭೌಮತ್ವದ ಎಲ್ಲ ಸದ್ಗುಣಗಳೂ ಸಚೇತನತ್ವವೂ ದೇವರಲ್ಲಿ ಯಾವಾಗಲೂ ಇರುತ್ತವೆ. ಆದ್ದರಿಂದ ದೇವರು ನಿರ್ಗುಣನೆನ್ನಕೂಡದು. ಅವನು ಸಗುಣನಿರುತ್ತಾನೆ. ಇದಲ್ಲದೆ ಈ ಜಗತ್ತೆಲ್ಲ ಮಾಯೆಯೆನ್ನುವದಾದರೂ ಸರಿಯಲ್ಲ. ಪರಮಾತ್ಮನು ಮಾಯೆಯನ್ನು ಉಂಟುಮಾಡಿದನೆಂಬುದಾದರೂ ಅಬದ್ಧವೇ ಸರಿ. ವಿನೋದಕ್ಕಾಗಿ ಈ ಮಾಯೆಯನ್ನು ಹುಟ್ಟಿಸಿದನೆಂದರೆ, ಸದಾನಂದ ಸ್ವರೂಪಿಯಾದ ದೇವರಿಗೆ ವಿನೋದವೆಲ್ಲಿ? ಮನುಷ್ಯರನ್ನು ಮೋಸಗೊಳಿಸಲಿಕ್ಕೆ ಇಲ್ಲವೆ ನಿರ್ಗುಣನಾದ್ದರಿಂದ ದೇವರು ಮಾಯೆಯನ್ನು ಹುಟ್ಟಿಸಿದನೆಂಬುದು ಸರಿಹೋಗುವದಿಲ್ಲ. ಮಾಯೆಯ ಪ್ರೇರಣೆಯಿಂದ ದೇವರು ಸಚೇತನನೂ ಸಗುಣಿಯೂ ಆಗುತ್ತಾನೆಂಬುದಾದರೂ ನ್ಯಾಯಕ್ಕೆ ವಿರುದ್ಧವಾದ ಮಾತೇ ಸರಿ. ದೇವರು ಸತ್ಯಸ್ವರೂಪಿಯಾದರೆ ಮಾಯೆಯನ್ನು ನಿರ್ಮಿಸಲಾರನು. ಮತ್ತು ಅವನು ಸರ್ವಜ್ಞನೂ ಸರ್ವಶಕ್ತನೂ ಎಂದು ನಂಬಿದರೆ, ಅವಿದ್ಯೆಯ ಅಥವಾ ಅಜ್ಞಾನದ ಪ್ರೇರಣೆಯಿಂದ ದೇವರು ಸೃಷ್ಟಿಯನ್ನು ನಿರ್ಮಿಸಿದನೆನ್ನಕೂಡದು.

ತ್ತಾರೆ.* ರಾಮಾನುಜಾಚಾರ್ಯರ ಶಿಷ್ಯರಿಗೆ ಶ್ರೀವೈಷ್ಣವರೆಂಬ ಹೆಸರು. ಇವರು ಪರಮಾತ್ಮನ ೫ ರೂಪಗಳನ್ನು ನಂಬುತ್ತಾರೆ. ಅವಾವವೆಂದರೆ:-ಅರ್ಚಾ (ಪ್ರತಿಮಾ), ವಿಭವ (ಅವತಾರ), ವ್ಯೂಹ (ಗುಂಪು), ಸೂಕ್ಷ್ಮ (ಪರಬ್ರಹ್ಮ), ಅಂತರ್ಯಾಮಿ (ಪ್ರೇರಕ). ರಾಮಕೃಷ್ಣವೆಂಕಟರಮಣ ಮುಂತಾದ ಮೂರ್ತಿಗಳು ಅರ್ಚಾ ಯೆನಿಸುತ್ತವೆ. ರಾಮಕೃಷ್ಣ ಮುಂತಾದ ಹಲವು ಅವತಾರಗಳು ವಿಭವವೆನಿಸುತ್ತವೆ. ವ್ಯೂಹದ ಪ್ರಕಾರಗಳು ನಾಲ್ಕು-ಪ್ರದ್ಯುಮ್ನ, ಅನಿರುದ್ಧ, ಸಂಕರ್ಷಣ, ವಾಸುದೇವ. ಪೂರ್ಣವಾದ ಮತ್ತು ಅಪಹತಪಾಪ್ಮತ್ವ, ಅಮರತ್ವ, ಶೋಕರಹಿತತ್ವ, ವಿಜಿಘತ್ಸತ್ವ (ಹಿಂಸೆಯ ಅಪೇಕ್ಷೆಯು ಇಲ್ಲದೆ ಇರೋಣ), ಸತ್ಯಸಂಕಲ್ಪ (ಬಯಸಿದ್ದು ಸಿದ್ಧವಾಗೋಣ), ಸತ್ಯಕಾಮತ್ವ (ಸರಿಯಾದ ಇಚ್ಛೆ ಇರುವಿಕೆ), ಈಯಾ

---

* ಮುಕ್ತಿಯನ್ನು ಹೊಂದಿದ ಜೀವವು ಪರಮಾತ್ಮನಲ್ಲಿದ್ದ ಜ್ಞಾನ, ಆನಂದ, ಅಪಹತ ಪಾಪ್ಮತ್ವ (ಪಾಪವು ನಿಃಶೇಷವಾಗಿ ಹೋಗುವಿಕೆ) ಸರ್ವಜ್ಞತ್ವ ಮುಂತಾದ ಗುಣಗಳನ್ನು ಪಡೆದು, ಈಶ್ವರತ್ವವನ್ನು ಹೊಂದಿದಂತೆ, ಆಯೀಶ್ವರನಲ್ಲಿದ್ದ ಸರ್ವಕರ್ತೃತ್ವವನ್ನು ಪಡೆಯಲಾರದು. ಅದ್ದರಿಂದ ಮುಕ್ತನಾದ ಜೀವದಲ್ಲಿ ಈಶ್ವರನಲ್ಲಿದ್ದ ಬಹುಶಃ ಎಲ್ಲ ಗುಣಗಳಿದ್ದರೂ ಸರ್ವಕರ್ತೃತ್ವಗುಣವೊಂದು ಇಲ್ಲದ್ದರಿಂದ ಈಮುಕ್ತಜೀವವು ಅವನಿಂದ ಭಿನ್ನವಾಗಿರುತ್ತದೆ. ಇದಲ್ಲದೆ ಈಮತದಂತೆ ಜೀವವು (ಅಥವಾ ಎಲ್ಲ ಸೃಷ್ಟಪದಾರ್ಥಗಳು) ಪರಮಾತ್ಮನ ಶರೀರವಾದ್ದರಿಂದ ಜೀವಪರಮಾತ್ಮರಲ್ಲಿ ಹೆಚ್ಚಿನ ಭೇದವಿಲ್ಲ. ಈಸಂಬಂಧದಿಂದ ರಾಮಾನುಜಾಚಾರ್ಯರು ತತ್ವಮುಕ್ತಾವಲಿಯೆಂಬ ಗ್ರಂಥದಲ್ಲಿ ಬರೆಯುವದೇನಂದರೆ:-ಸೃಷ್ಟಿಯ ಲಯಕಾಲದಲ್ಲಿ ಜೀವಾತ್ಮಗಳು ಪರಮಾತ್ಮನಲ್ಲಿ ಸೇರಿದರೂ ತಮ್ಮ ನಿಜಸ್ವರೂಪವನ್ನು ಕಳಕೊಳ್ಳುವದಿಲ್ಲ. ಜೇನುತುಪ್ಪದಲ್ಲಿ ಕೂಡಿದ ಬೇರೆ ಬೇರೆ ತರದ ಹೂವಿನ ರಸಗಳು ತಂತಮ್ಮ ರುಚಿಗಳನ್ನು ಕಳೆಕೊಂಡಿರುವದಿಲ್ಲ. ಹಾಗೆಯೇ ಜೀವಾತ್ಮಗಳು ಸೃಷ್ಟಿಲಯದಲ್ಲಿ ಪರಮಾತ್ಮನಲ್ಲಿದ್ದರೂ ಅವನಲ್ಲಿ ಐಕ್ಯಹೊಂದದೆ, ಪುನಃ ಸೃಷ್ಟಿಯ ಕಾಲಕ್ಕೆ ಅವನಿಂದ ಭಿನ್ನವಾಗುತ್ತವೆ. ಹೊಳೆಗಳು ಕಡಲಿನಿಂದ ಭಿನ್ನವಾದಂತೆಯೂ ಉಪ್ಪನೀರು ಸಿಹಿನೀರಿನಿಂದ ಭಿನ್ನವಾದಂತೆಯೂ ಜೀವಾತ್ಮವು ಪರಮಾತ್ಮನಿಂದ ಭಿನ್ನವಾಗಿರುತ್ತದೆ.

ರು ಗುಣಗಳುಳ್ಳ ಪರಬ್ರಹ್ಮವಸ್ತುವಿಗೆ ಸೂಕ್ಷ್ಮವೆನ್ನುತ್ತಾರೆ. ಅಂತರ್ಯಾಮಿಯೆಂದರೆ ಎಲ್ಲ ಜೀವಗಳಲ್ಲಿದ್ದು ಅವುಗಳನ್ನು ಪ್ರೇರಿಸುವವನು. ಶ್ರೀವೈಷ್ಣವರು ಮೊದಲು ಅರ್ಚಾರೂಪವನ್ನು ಭಜಿಸಿ, ತಮ್ಮ ಪಾಪವನ್ನು ಕಳೆದುಕೊಂಡ ಬಳಿಕ, ವಿಭವರೂಪವನ್ನು ಭಜಿಸಲಿಕ್ಕೆ ಯೋಗ್ಯತೆಯನ್ನು ಪಡೆಯುವರು. ಬಳಿಕ ಕ್ರಮದಿಂದ ವ್ಯೂಹ-ಸೂಕ್ಷ್ಮ-ರೂಪಗಳನ್ನು ಭಜಿಸಲಿಕ್ಕೆ ತಕ್ಕವರಾಗಿ, ಕೊನೆಯಲ್ಲಿ ಅಂತರ್ಯಾಮಿರೂಪದ ಉಪಾಸನೆಯನ್ನು ಮಾಡಲಿಕ್ಕೆ ಅಧಿಕಾರಪಡೆಯುವರು,

ಈಯಯ್ದೂ ರೂಪಗಳ ಉಪಾಸನೆಯು ಪ್ರಕಾರಗಳಾದರೂ ೫ ಬೇರೆ ಬೇರೆಯಾಗಿರುತ್ತವೆಂದು ಪಂಚರಾತ್ರಾಗಮವೆಂಬ ಗ್ರಂಥದಲ್ಲಿ ಬರೆದಿರುತ್ತದೆ. ಆಪ್ರಕಾರಗಳಾವವೆಂದರೆ—ಅಭಿಗಮನ, ಉಪಾದಾನ, ಇಜ್ಯಾ, ಸ್ವಾಧ್ಯಾಯ, ಯೋಗ. ಅಭಿಗಮನವೆಂದರೆ ದೇವತಾಸ್ಥಾನಗಳ ಉಡುಗೋಣ, ಸಾರಿಸೋಣ ಮುಂತಾದ ಕೆಲಸವು. ಉಪಾದಾನವೆಂದರೆ ಗಂಧಪುಷ್ಪ ಮುಂತಾದ ಪೂಜಾದ್ರವ್ಯಗಳ ಸಂಪಾದನವು. ಇಜ್ಯೆಯೆಂದರೆ ದೇವತಾಪೂಜೆಯು. ಸ್ವಾಧ್ಯಾಯವೆಂದರೆ ಅಷ್ಟಾಕ್ಷರ-ದ್ವಾದಶಾಕ್ಷರಾದಿ-ಜಪ, ವಿಷ್ಣುಸೂಕ್ತ-ಸ್ತೋತ್ರಗಳ ಪಠನ, ಭಜನ, ತತ್ವಶಾಸ್ತ್ರಾಭ್ಯಾಸ ಇವುಗಳನ್ನು ಮಾಡೋಣವು. ಯೋಗವೆಂದರೆ ಏಕಚಿತ್ತದಿಂದ ದೇವತಾಧ್ಯಾನ ಮಾಡೋಣವು. ಈ ೫ ಬಗೆಯಿಂದ ಭಜಿಸಿದವರು ಪರಮಕಾರುಣಿಕನಾದ ಪರಮಾತ್ಮನ ಪೂರ್ಣಕೃಪೆಗೆ ಪಾತ್ರರಾಗಿ ತಮ್ಮ ಅಜ್ಞಾನವನ್ನು ಕಳೆದುಕೊಂಡು, ಪುನರಾವೃತ್ತಿಯಿಲ್ಲದ ಶಾಶ್ವತಪದವನ್ನು ಪಡೆಯುತ್ತಾರೆ.

ಯುರೋಪಿಯರು ಮೈಗ್ಗೆ ಬಣ್ಣಬರೆಕೊಂಡು ಗಿಡದ ಹೊದರಿನಲ್ಲಿದ್ದು ಸುಧಾರಣೆಯ ಸಂಗತಿಗಳ ಜ್ಞಾನವಿಲ್ಲದೆ ದನಗಳಂತೆ ಜೀವಿಸುತ್ತಿರುವಾಗ, ನಮ್ಮ ಪೂರ್ವಜರಾದ ಈಭರತಖಂಡದ ನಿವಾಸಿಗಳು ಬೇರೆಬೇರೆ ಶಾಸ್ತ್ರಗಳನ್ನು ಶೋಧಿಸಿ, ಸುಧಾರಣೆಯ ಶಿಖರವನ್ನು ಮುಟ್ಟಿದ್ದರೆಂಬದೂ ಮುಂದೆ ದುರ್ದೈವದಿಂದ ಇಲ್ಲಿಯ ಎಲ್ಲ ವಿದ್ಯಾವೃಕ್ಷಗಳು ಒಣಗಿ ಹೋಗಿ, ಪಾಶ್ಚಾತ್ಯರ ಆಶ್ರಯವನ್ನೆಯ್ದು ಯುರೋಪಖಂಡದ ಕಳ್ನೆಲದಲ್ಲಿ ಅಂಕುರಿಸಿ, ಬೆಳೆದು

ಹಣ್ಣುಕಾಯಿಹೂದಳಿರುಗಳಿಂದ ತುಂಬಿದ ದೊಡ್ಡ ಮರಗಳಾದ್ದರಿಂದ ಪಾಶ್ಚಾತ್ಯರು ಆ ಮರಗಳ ಹೂಹಣ್ಣುಗಳನ್ನು ಮುಂದಿರಿಸಿ ನಮ್ಮನ್ನು ಆಕ್ಷರಗೊಳಿಸುತ್ತಾರೆಂಬುದೂ ಎಲ್ಲರಿಗೆ ಗೊತ್ತಿರುತ್ತದಷ್ಟೇ. ಇದೇ ನೇಮಕ್ಕನುಸರಿಸಿ, ರಾಮಾನುಜಾಚಾರ್ಯರ ತರುವಾಯ ಶ್ರೀವೈಷ್ಣವರು ತಮ್ಮ ತತ್ವಗಳನ್ನು ಮರೆತು, ಮನಸಿಗೆ ಬಂದಂತೆ ನಡೆಯಲಾರಂಭಿಸಿದರು. ಆದ್ದರಿಂದ ೧೩ನೆಯ ಶತಕದ ಕೊನೆಯಲ್ಲಿ ಕಂಚಿಯ ಬ್ರಾಹ್ಮಣನಾದ ವೇದಾಂತಾಚಾರ್ಯನೆಂಬವನೊಬ್ಬನು ತಾನು ವಿಷ್ಣುವಿನಿಂದ ಪ್ರೇರಿತನಾಗಿರುತ್ತೇನೆಂತಲೂ ತನ್ನ ಮುಖ್ಯೋದ್ದೇಶವು ರಾಮಾನುಜರಲ್ಲಿ ಸೇರಿದ ತಪ್ಪು ತಿಳಿವಳಿಕೆಗಳನ್ನು ದೂರ ಮಾಡಬೇಕೆಂದಿರುತ್ತದೆಂತಲೂ ಹೇಳಿ, ಬಡಗಣಬ್ರಾಹ್ಮಣರು ಅನುಸರಿಸುವ ಮತತತ್ವಗಳು ತೆಂಕಣಬ್ರಾಹ್ಮಣರಿಗಿಂತ ಹೆಚ್ಚು ಸರಿಯಾಗಿರುತ್ತವೆಂದು ತೀರ್ಪುಮಾಡಿದನು. ಅಂದಿನಿಂದ ಶ್ರೀವೈಷ್ಣವರಲ್ಲಿ ಬಡಗಣರು ತೆಂಕಣರು ಎಂಬ ಎರಡು ವಿಭಾಗಗಳಾದವು. ಇವರು ಒಬ್ಬರನ್ನು ಮತ್ತೊಬ್ಬರು ಹಳಿದಷ್ಟು, ಭಿನ್ನಮತದವರನ್ನು ಜರೆಯುವದಿಲ್ಲ. ಇವರೊಳಗಿರುವ ಮುಖ್ಯಭೇದಗಳಾವವೆಂದರೆ:-೧. ಬಡಗಣರು ವೇದಗಳು ಪ್ರಮಾಣವೆಂದು ನಂಬುತ್ತಾರೆ; ಆದರೆ ತೆಂಕಣರು ತಮಿಳದಲ್ಲಿ ಬರೆದ ನಾಲ್ಕುಸಾವಿರ (ನಾಲಾಯಿರ) ಶ್ಲೋಕಗಳು ವೇದಗಳಿಗಿಂತ ಪೂರ್ವದವೆಂತಲೂ ಹೆಚ್ಚು ಪ್ರಮಾಣವೆಂತಲೂ ತಿಳಿಯುವದಲ್ಲದೆ ತಮ್ಮ ಪೂಜಾಸಂಸ್ಕಾರಗಳಲ್ಲಿ ಆಶ್ಲೋಕಗಳನ್ನೇ ಅನ್ನುತ್ತಾರೆ. ೨. ಜೀವಾತ್ಮವು ತನ್ನ ಇಚ್ಛಾಪ್ರಯತ್ನಕೃತಿಗಳಿಂದ ಮರ್ಕಟನ್ಯಾಯದಂತೆ ಪರಮಾತ್ಮನನ್ನವಲಂಬಿಸುತ್ತದೆಂದು ಬಡಗಣರು ಎಣಿಸುತ್ತಾರೆ; ಆದರೆ ತೆಂಕಣರು ಜೀವಾತ್ಮವು ನಿರಾಶ್ರಿತೋದಾಸೀನವಾದುದೆಂತಲೂ ಮಾರ್ಜಾಲನ್ಯಾಯದಂತೆ ಪರಮಾತ್ಮನು ತನ್ನ ಮನಸ್ಸಿಗೆ ಬಂದಂತೆ ಅದರಿಂದ ಮಾಡಿಸುತ್ತಾನೆಂತಲೂ ನಂಬುತ್ತಾರೆ. ೩. ತೆಂಕಣರು ವಿಷ್ಣುವಿನ ಹೆಂಡತಿಯಾದ ಶಕ್ತಿಯು ಜನನಮರಣವುಳ್ಳ ದೇವಾಂಶವೆಂತಲೂ ವಿಷ್ಣುವಿನಂತೆ ಮುಕ್ತಿದಾಯಕಳಲ್ಲವಿದ್ದರೂ ಅವನ ಪುರುಷಕಾರಳು (ಮಂತ್ರಿಯು) ಆಗಿರುತ್ತಾಳೆಂತಲೂ ನಂಬುತ್ತಾರೆ; ಆದರೆ ಬಡಗಣರು ಆಕೆಯು ಅನಾದ್ಯನಂತಳೆಂತಲೂ ವಿಷ್ಣುವಿನಂತೆ ಮುಕ್ತಿಯ ಉಪಾಯವಾಗಿರುತ್ತಾಳೆಂತಲೂ ನಂಬುತ್ತಾರೆ. ೪. ಬಡಗಣರು ವಿಷ್ಣುವಿನ ಬಲಪಾ

ದವೇ ಮುಖ್ಯವಾದುದೆಂದೆಣಿಸಿ, ತಮ್ಮ ಹಣೆಯ ಮೇಲೆ ಆಪಾದದ ಸೂಚಕವಾದ ಒಂದು ಬಿಳಿಗೆರೆಯನ್ನು ಬರೆದುಕೊಂಡು, ಹಣೆಯ ನಡುವೆ ಲಕ್ಷ್ಮಿಯ ಸೂಚಕವಾದ ಅಕ್ಷತಿಯನ್ನು ಹಚ್ಚಿಕೊಳ್ಳುತ್ತಾರೆ; ಆದರೆ ತೆಂಕಣರು ವಿಷ್ಣುವಿನ ಎರಡು ಪಾದಗಳೂ ಲಕ್ಷ್ಮಿಯೂ ಪದ್ಮವೂ ಸರಿಯಾಗಿ ಪೂಜ್ಯವಾದವೆಂದೆಣಿಸಿ, ಎರಡು ಗೆರೆಗಳನ್ನು ಬರೆದುಕೊಂಡು, ಅವುಗಳ ಬುಡದಲ್ಲಿ ಪದ್ಮಪೀಠವನ್ನು ರಚಿಸಿ, ನಡುವೆ ಅಕ್ಷತಿಯ ಬೊಟ್ಟನ್ನು ಇಟ್ಟುಕೊಳ್ಳುತ್ತಾರೆ. ೫. ಬಡಗಣರ ವಿಧವೆಗಳು ಉಳಿದ ಬ್ರಾಹ್ಮಣರಂತೆ ಕೂದಲತೆಗಿಸಿಕೊಳ್ಳುತ್ತಾರೆ; ಆದರೆ ತೆಂಕಣರು ವೃದ್ಧಮನುವಿನ ವಚನಾಧಾರದಿಂದ ತಮ್ಮ ವಿಧವೆಗಳ ಕೂದಲು ತೆಗಿಸಿಕೊಳ್ಳುವದಿಲ್ಲ. ಈಪ್ರಕಾರ ಹಲವು ಭೇದಗಳಿದ್ದರೂ ಎರಡೂ ಪಕ್ಷದವರು ಶಂಖಚಕ್ರಗದಾಪದ್ಮಗಳ ಮುದ್ರಣವನ್ನು ತೆಗೆದುಕೊಳ್ಳುವದಲ್ಲದೆ, ದೃಷ್ಟಿದೋಷಕ್ಕೆ ಹೆದರಿ, ತಮ್ಮ ಊಟದ ಪದಾರ್ಥಗಳು ಎರಡನೆಯವರ ಕಣ್ಣಿಗೆ ಬೀಳಗೊಡದಂತೆ ಎಚ್ಚರ ಪಡುತ್ತಾರೆ. ಬಡಗಣರ ಮುಖ್ಯಮಠವು ಅಹೋಬಲವು, ಮತ್ತು ತೆಂಕಣರ ಮುಖ್ಯಮಠವು ವಾನಮಾಮಲವು.* ಈಯೆರಡೂ ಮಠಗಳ ಆಚಾರ್ಯರು ಗೃಹಸ್ಥಾಶ್ರಮಿಗಳಿರುತ್ತಾರೆ.

---

* ವಾನಮಾಮಲವು ಮದ್ರಾಸ ಇಲಾಖೆಯೊಳಗೆ ತಿನ್ನೆವೆಲ್ಲಿ ಜಿಲ್ಲೆಯಲ್ಲಿ ಒಂದು ಊರು ಇರುತ್ತದೆ.





# ೫ ಶ್ರೀಮಧ್ವಾಚಾರ್ಯರು.

ರಾಮಾನುಜಾಚಾರ್ಯರು ಸ್ವರ್ಗಸ್ಥರಾದ ೫೦ ವರ್ಷಗಳೊಳಗೇ ಮತ್ತೊಬ್ಬ ವೈಷ್ಣವಮತಸ್ಥಾಪಕರು ಹುಟ್ಟಿದರು. ಇವರೇ ಶ್ರೀಮಧ್ವಾಚಾರ್ಯರು. * ಇವರು ದಕ್ಷಿಣಕಾನಡಾ ಜಿಲ್ಲೆಯಲ್ಲಿ

---

* ವಾಯುವು ತ್ರೇತಾಯುಗದಲ್ಲಿ ಹನುಮಂತನೆಂತಲೂ, ದ್ವಾಪಾರದಲ್ಲಿ ಭೀಮಸೇನನೆಂತಲೂ, ಕಲಿಯುಗದಲ್ಲಿ ಮಧ್ವಾಚಾರ್ಯರೆಂತಲೂ ಭಗವತ್ಕಾರ್ಯ ಸಾಧಿಸಲಿಕ್ಕೆ ಅವತಾರಮಾಡಿದನೆಂದು ಮಾಧ್ವರ ಗ್ರಹಿಕೆಯುಂಟು. ಅವರು ಬಳಿತ್ಥಾಯೆಂಬ ಮಂತ್ರಕ್ಕೆ ತಮಗೆ ಅನುಕೂಲವಾದ ಅರ್ಥವನ್ನು ಹಚ್ಚಿ, ಆ ಮಂತ್ರವು ಈ ಮೂರವತಾರಗಳಿಗೆ ಪ್ರಮಾಣವೆಂದು ನಂಬುತ್ತಾರೆ. ಈಯರ್ಥವು ಸಾಯಣರಚಿತ ಭಾಷ್ಯದಲ್ಲಿ ಬರೆದ ಅರ್ಥದಿಂದ ಭಿನ್ನವಾಗಿರುತ್ತದೆ. ಮಧ್ವಾಚಾರ್ಯರಿಗೆ ಅನಂದತೀರ್ಥ, ಪೂರ್ಣಪ್ರಜ್ಞ ಎಂಬ ಹೆಸರುಗಳಾದರೂ ಇರುತ್ತವೆ.

ಶಿವರೂಪ್ಯವೆಂಬ ಗ್ರಾಮದಲ್ಲಿ ೧೧೯೯ ರಲ್ಲಿ ಹುಟ್ಟಿದರು. ಇವರ ತಂದೆತಾಯಿಗಳು ಸ್ಮಾರ್ತರೇ ಸರಿ. ಇವರ ತಂದೆಯ ಹೆಸರು ನಡುಮನೆ (ಮಧ್ಯಗೇಹ) ಭಟ್ಟ. ಇವರು ಒಂದೆರಡು ವರ್ಷದವರಿರುವಾಗ ೩೦/೪೦ ಸೇರು ಕುದಿಸಿದ ಹುರುಳಿಯನ್ನು ತಿಂದು, ಪಚನ ಮಾಡಿಕೊಂಡರಂತೆ. ಇವರಿಗೆ ವಿಷ್ಣುತೀರ್ಥನೆಂಬೊಬ್ಬ ತಮ್ಮನಿದ್ದನು. ಇವರ ಮೊದಲಿನ ಹೆಸರು ವಾಸುದೇವ.

ಮಧ್ವಾಚಾರ್ಯರು ಮೊದಲು ಅನಂತೇಶ್ವರದಲ್ಲಿ† ಅಧ್ಯಯನ ಮಾಡಿ ಎಷ್ಟೋ ದಿವಸ ಸ್ಮಾರ್ತಮತದವರೇ ಆಗಿದ್ದರು. ಅವರು ಮುಂದೆ ಅಚ್ಯುತಪ್ರೇಕ್ಷರಿಂದ ಸನ್ಯಾಸಾಶ್ರಮ ತೆಗೆದುಕೊಂಡು, ವೈಷ್ಣವಮತವಿಡಿದು ಉಡಪಿ,* ಮಧ್ಯತಾಲ,† ಸುಬ್ರಹ್ಮಣ್ಯ‡ ಈ ಮೂರೆಡೆಗಳಲ್ಲಿ ಸಾಲಿಗ್ರಾಮಗಳನ್ನು ಸ್ಥಾಪಿಸಿದ್ದಲ್ಲದೆ, ಉಡಪಿಯಲ್ಲೊಂದು ಕೃಷ್ಣನ ಗುಡಿಯನ್ನು ಕಟ್ಟಿಸಿದರು. ಈಗಾದರೂ ಉಡಪಿಯು ಮಾಧ್ವರ ಪವಿತ್ರಸ್ಥಾನವು. ಮಧ್ವಾಚಾರ್ಯರು ಉಡಪಿ

---

† ಅನಂತೇಶ್ವರವು ಉಡುಪಿಯಲ್ಲಿಯೊಂದು ಶಿವಾಲಯವಿರುತ್ತದೆ. ಮಧ್ವಾಚಾರ್ಯರ ತಂದೆತಾಯಿಗಳು ಈ ದೇವರಿಗೆ ನಡೆದುಕೊಂಡು, ಮಧ್ವಾಚಾರ್ಯರನ್ನು ಹೆತ್ತರು. ಹೀಗಿದ್ದು ಮುಂದೆ ಇವರು ಈಶ್ವರನ ಪೂಜೆಯನ್ನು ಕಡಿಮೆ ಮಾಡಿದ್ದರಿಂದ ಸ್ಮಾರ್ತರು ಸ್ವಾಭಾವಿಕವಾಗಿ ಇವರಿಗೆ ಭಸ್ಮಾಸುರನ ಅವತಾರವೆನ್ನುತ್ತಾರೆ.

* ಉಡಪಿಯು ದಕ್ಷಿಣ ಕನ್ನಡ ಜಿಲ್ಲೆಯಲ್ಲಿಯೊಂದು ತಾಲೂಕಿನ ಸ್ಥಳವಿರುತ್ತದೆ. ಇದು ಮಾಧ್ವರ ಪವಿತ್ರಸ್ಥಾನವು.

† ಮಧ್ಯತಾಲವೆಂದರೆಯಾವ ಪ್ರದೇಶವೆಂಬುದು ಗೊತ್ತಾಗುವದಿಲ್ಲ.

‡ ಸುಬ್ರಹ್ಮಣ್ಯಕ್ಕೆ ಪುಷ್ಪಗಿರಿಯೆಂತಲೂ ಅನ್ನುತ್ತಾರೆ. ಇದು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನೈರುತ್ಯಕೋನಗಳ ಮೇರೆಯ ಮೇಲಿದ್ದ ಸಹ್ಯಾದ್ರಿಯ ಶಿಖರವಾಗಿದೆ. ಈ ಶಿಖರದ ಆಕಾರವು ಎತ್ತಿನ ಇಣಿಯ ಹಾಗೆ ಇರುತ್ತದೆ. ಇದರ ಕೆಳಗಿರುವ ಗಡ್ತವಲ್ಲಿ ಕಾವಸಗಳು ದೊರೆಯುತ್ತವೆ. ಇಲ್ಲಿ ಪ್ರತಿವರ್ಷ ಡಿಸಂಬರದಲ್ಲಿ ಆಗುವ ಜಾತ್ರೆಗೆ ಸಾವಿರಾರು ಜನರು ಬರುತ್ತಾರೆ.

ಮತ್ತೀ ರೀತಿಯ ಎಷ್ಟೋ ಮತಗ್ರಂಥಗಳನ್ನು ಬರೆದರು.‡ ಬಳಿಕ ಪ್ರವಾಸಕ್ಕೆ ಹೊರಟು, ಬೇರೆ ಬೇರೆ ಮತದವರನ್ನು ವಾದದಲ್ಲಿ ಗೆದ್ದು, ಬದರಿಕಾಶ್ರಮದಲ್ಲಿ ಸ್ವರ್ಗಸ್ಥರಾದರು, ೧೧೩೮.

ದಕ್ಷಿಣಕನ್ನಡಜಿಲ್ಲೆಯಲ್ಲಿ ಮಧ್ವಾಚಾರ್ಯರು ಸ್ಥಾಪಿಸಿದ ಎಂಟು ಮಠಗಳ ಮುಖ್ಯರಾದ ಯತಿಗಳು ಎರಡು ವರ್ಷಕ್ಕೊಮ್ಮೆ ಮಾಧ್ವರ ಮುಖ್ಯಸ್ಥಾನವಾದ ಉಡಪಿಯ ಮಠದ ಸ್ವಾಮಿಗಳಾಗುತ್ತಾರೆ. ಈಸಮಾರಂಭಕ್ಕೆ ಪರ್ಯಾಯವೆನ್ನುತ್ತಾರೆ. ಈಯುತ್ಸವ ನೋಡಲಿಕ್ಕೆ ದೂರದೂರಿನ ಮಾಧ್ವರು ಬರುತ್ತಾರೆ. ಮೈಸೂರ ನಾಡಿನಲ್ಲಿ ಸೋಸಿಲೆ, ಹೊಳೆನರಸಿಪುರವೆಂಬೂರುಗಳಲ್ಲಿಯೂ ಮಾಧ್ವರ ಮಠಗಳುಂಟು.

ಮಧ್ವಮತ—ಅದ್ವೈತರು ಜೀವಪರಮಾತ್ಮರೊಂದೇ ಎಂತಲೂ, ಪರಮಾತ್ಮವ್ಯತಿರಿಕ್ತವಾದ ಜಗತ್ತು ಮಿಥ್ಯೆಯೆಂತಲೂ, ಜೀವವು ಪರಮಾತ್ಮನಲ್ಲಿ ಐಕ್ಯವಾಗುವದೇ ಮೋಕ್ಷವೆಂತಲೂ ತಿಳಿಯುತ್ತಾರೆ. ಆದರೆ ಮಾಧ್ವರ ಮತವು ಇದಕ್ಕೆ ತೀರ ಭಿನ್ನವಾಗಿರುತ್ತದೆ. ಅವರು “ಸೋಽಹಮ್ ಬ್ರಹ್ಮ” “ತತ್ವಮಸಿ” ಎಂಬ ವೇದವಾಕ್ಯಗಳು ಜೀವಪರಮಾತ್ಮರ ಭೇದವನ್ನು ತೋರಿಸುತ್ತವೆ ಹೊರತು, ಅವರ ತಾದಾತ್ಮ್ಯವನ್ನು ತೋರಿಸುವದಿಲ್ಲೆಂದು ವಾದಿಸುತ್ತಾರೆ. ಅವರ ಮತದಂತೆ ಜೀವವು ಪರಮಾತ್ಮನಿಂದ ಭಿನ್ನವಾಗಿರುತ್ತದೆ. ಅದು ಹೇಗಂದರೆ:—ಅವರು ಸ್ವತಂತ್ರತತ್ವ—ಅಸ್ವತಂತ್ರತತ್ವಗಳೆಂಬ ಎರಡು ತತ್ವಗಳು ಈಸೃಷ್ಟಿಯ ಸತ್ಯವಾದ ಮೂಲಕಾರಣಗಳೆಂದು ನಂಬುತ್ತಾರೆ. ದೋಷರಹಿತನಾದ ಮತ್ತು ಸರ್ವಗುಣಪೂರ್ಣನಾದ

‡ ಇವರು ಒಟ್ಟು ೩೭ ಗ್ರಂಥಗಳನ್ನು ಬರೆದರು. ಅವುಗಳಲ್ಲಿ ಮುಖ್ಯವಾದವುಗಳಾವವೆಂದರೆ:—ಗೀತಾಭಾಷ್ಯ, ಬ್ರಹ್ಮಸೂತ್ರಭಾಷ್ಯ, ಮಾಯಾವಾದಖಂಡನ, ಪ್ರಪಂಚಮಿಥ್ಯಾತ್ವಾನುಮಾನಖಂಡನ, ತತ್ವವಿವೇಕ, ಕರ್ಮನಿರ್ಣಯ, ಋಗ್ಭಾಷ್ಯ, ಸದಾಚಾರಸ್ಮೃತಿ, ಶ್ರೀಮದ್ಭಾಗವತ-ತಾತ್ಪರ್ಯ, ಮಹಾಭಾರತ-ತಾತ್ಪರ್ಯನಿರ್ಣಯ, ಐತರೇಯೋಪನಿಷದ್ಭಾಷ್ಯ, ತೈತ್ತಿರೀಯೋಪನಿಷದ್ಭಾಷ್ಯ, ಬೃಹದಾರಣ್ಯಭಾಷ್ಯ, ಛಾಂದೋಗ್ಯೋಪನಿಷದ್ಭಾಷ್ಯ, ಅಥರ್ವಣೋಪನಿಷದ್ಭಾಷ್ಯ, ಮಾಂಡೂಕೋಪನಿಷದ್ಭಾಷ್ಯ, ಯಮಕಭಾರತ, ದ್ವಾದಶಸ್ತೋತ್ರ.

ವಿಷ್ಣುವೇ ಸ್ವತಂತ್ರತತ್ವವು, ಉಳಿದ ಎಲ್ಲ ಜೀವಾತ್ಮರು ಅಸ್ವತಂತ್ರತತ್ವವು. ಜೀವಪರಮಾತ್ಮರ ಸಂಬಂಧವು ಸೇವಸೇವ್ಯಕಭಾವದಿಂದುಂಟಾದ್ದರಿಂದ ಅವರು ಒಂದೇ ಆಗಲಾರರು. ಅರಸನು ಆಳಿನಿಂದ ಹೇಗೆ ಭಿನ್ನವಾಗಿರುತ್ತಾನೋ, ಹಕ್ಕಿಯು ಅದನ್ನು ಕಟ್ಟಿದ ಹಗ್ಗದಿಂದ ಹೇಗೆ ಭಿನ್ನವಾಗಿರುತ್ತದೋ, ಗಿಡದಿಂದ ರಸವು ಹೇಗೆ ಭಿನ್ನವಾಗಿರುತ್ತದೋ, ಹೊಳೆಗಳು ಸಮುದ್ರದಿಂದ ಹೇಗೆ ಭಿನ್ನವಾಗಿರುತ್ತವೋ, ಕಳ್ಳನು ಕಳಕೊಂಡವನಿಂದ ಹೇಗೆ ಭಿನ್ನವಾಗಿರುತ್ತಾನೋ, ಮನುಷ್ಯನ ಉತ್ಸಾಹಶಕ್ತಿಯು ಮನುಷ್ಯನಿಂದ ಹೇಗೆ ಭಿನ್ನವಾಗಿರುತ್ತದೋ, ಅದೇ ತೆರದಿಂದ ಜೀವಾತ್ಮವು ಪರಮಾತ್ಮನಿಂದ ಭಿನ್ನವಾಗಿರುತ್ತದೆ. ಮಾಧ್ವರು ರಾಮಾನುಜರಂತೆ ಜಡಸೃಷ್ಟಿಯು ಸೃಷ್ಟಿಯ ಮೂಲಕಾರಣಗಳಲ್ಲಿಯೊಂದಾಗಿರುತ್ತದೆಂದು ಎಣಿಸುವದಿಲ್ಲ; ಸೃಷ್ಟಿಯ ಉತ್ಪತ್ತಿಯ ಕಾಲದಲ್ಲಿ ಜಡಸೃಷ್ಟಿಯು ಪರಮಾತ್ಮನಲ್ಲಿ ಐಕ್ಯವಾಗಿತ್ತೆಂತಲೂ, ಉತ್ಪನ್ನವಾದ ಮೇಲೆ ಅವನಿಂದ ಕಾರ್ಯಕಾರಣ-ಭಾವದಿಂದ ಭಿನ್ನವಾಗಿರುತ್ತದೆಂತಲೂ ನಂಬುವರು. ಮಾಧ್ವರು ಜೀವಪರಮಾತ್ಮರ ಭೇದವನ್ನು ಕಲ್ಪಿಸುವದಲ್ಲದೆ, ಒಟ್ಟು ೫ ಭೇದಗಳನ್ನು ಕಲ್ಪಿಸುತ್ತಾರೆ. ಅವಾವವೆಂದರೆ:—೧ ಜೀವಜೀವಭೇದ, ೨ ಜೀವಜಡಭೇದ, ೩ ಜಡಜಡಭೇದ, ೪ ಜೀವಪರಮಾತ್ಮಭೇದ, ೫ ಜಡಪರಮಾತ್ಮಭೇದ. ಜೀವವು ಅನಂತವು, ಮತ್ತು ಪರಮಾತ್ಮನಿಗೆ ನಿಕಟವಾಗಿ ಸಂಬಂಧಿಸಿದ್ದು. ಆದರೂ ಅದು ಪರಮಾತ್ಮನಲ್ಲಿ ಐಕ್ಯವಾಗಿರಲಾರದೆಂದು ಅವರ ಗ್ರಹಿಕೆಯುಂಟು.

ಮಾಧ್ವರು ಮೂರು ಬಗೆಯಿಂದ ವಿಷ್ಣುವನ್ನು ವಂದಿಸುತ್ತಾರೆ:—(೧) ಅಂಕನ ಅಥವಾ ಮುದ್ರಾಧಾರಣ, (೨) ನಾಮಕರಣ, (೩) ಭಜನೆ.* ಶಂಖಚಕ್ರಗದಾ ಮುಂತಾದ ವಿಷ್ಣುವಿನ ಆಯುಧಾಕೃತಿ

---

† ಈ ಭಜನೆಯು ೧೦ ಪ್ರಕಾರದ್ದುಂಟು:— (೧) ಸತ್ಯವಚನ, (೨) ಹಿತವಚನ, (೩) ಪ್ರಿಯವಚನ, (೪) ಸ್ವಾಧ್ಯಾಯ (ವೇದ ಗ್ರಂಥಗಳ ಅಧ್ಯಯನ), (೫) ದಾನ, (೬) ಪರಿತ್ರಾಣ, (೭) ಪರಿರಕ್ಷಣ, (೮) ದಯಾ, (೯) ಸ್ಪೃಹಾ, (೧೦) ಶ್ರದ್ಧಾ (ಗುರುಹಿರಿಯರು ಮುಂತಾದವರ ವಾಕ್ಯಗಳಲ್ಲಿ ವಿಶ್ವಾಸ). ಇವುಗಳಲ್ಲಿ ಪ್ರತಿಯೊಂದನ್ನು ಮಾಡಿ, ವಿಷ್ಣುವೇ ಇದು ನಿನ್ನ ಪ್ರೀತ್ಯರ್ಥ ಮಾಡಿದ್ದು ಎಂದು ಆತನಿಗೆ ಸಮರ್ಪಿಸುವದೇ ಭಜನೆಯು.

ಗಳುಳ್ಳ ಕಾದಕಬ್ಬಿಣದ ಮುದ್ರೆಗಳಿಂದ ವಿಷ್ಣುವಿನ ರೂಪವು ನೆನಪಾಗಿ ದೇಹವು ಪವಿತ್ರವಾಗುವದೆಂತಲೂ, ಹುಡುಗರುಹುಟ್ಟಿದಾಗ ವಿಷ್ಣುವಿನ ಹೆಸರಿಡುವದರಿಂದ ಬಾರಿಬಾರಿಗೆ ದೇವರ ನಾಮೋಚ್ಚಾರಣವಾಗುತ್ತದೆಂತಲೂ, ಭಜನೆಯಿಂದ ದುಷ್ಟವಿಚಾರಗಳು ದೂರಾಗಿ, ಅಂತಃಕರಣವು ಶುದ್ಧವಾಗುತ್ತದೆಂತಲೂ ಅವರು ನಂಬುವರು. ಸತ್ಯ, ಸದ್ವಿಚಾರ, ಮೃದುಭಾಷಣ, ಅಧ್ಯಯನ, ಔದಾರ್ಯ, ಪ್ರೀತಿ, ಸಂರಕ್ಷಣ, ದಯಾ, ಭಕ್ತಿ ಇವೇ ದೇವರ ಆಜ್ಞೆಗಳೆಂದು ಅವರು ತಿಳಿಯುತ್ತಾರೆ. ಅವರ ಮತದಂತೆ ಸೃಷ್ಟಿಸ್ಥಿತಿಲಯ, ದೈವ, ಜ್ಞಾನ, ಅಜ್ಞಾನ, ಬಂಧ, ಮೋಕ್ಷ, ಇವುಗಳಿಗೆ ವಿಷ್ಣುವೇ ನಿಯಾಮಕನಾದ್ದರಿಂದ ಅವನೇ ಸರ್ವೋತ್ತಮನು. ಅವರು ದೇವರಲ್ಲಿ ಬೇರೆಬೇರೆ ತರಗತಿಗಳನ್ನು ಕಲ್ಪಿಸಿ, ವಿಷ್ಣುವು ಸರ್ವೋತ್ತಮನೆಂತಲೂ, ಅವನ ತರುವಾಯ ಲಕ್ಷ್ಮಿಯೆಂತಲೂ, ಆಕೆಯ ಕೆಳಗೆ ಅನುಕ್ರಮದಿಂದ ಬ್ರಹ್ಮ, ವಾಯು, ಸರಸ್ವತಿ, ಶೇಷ, ಮೃಡ, ವಿಷ್ಣುವಿನ ಆರು ಮಂದಿ ಹೆಂಡಂದಿರು ಸುಪರ್ಣೀ, ವಾರುಣೀ, ಪಾರ್ವತೀ, ಚಂದ್ರ, ಕಾಮ, ಅನಿರುದ್ಧ, ರತಿ, ದಕ್ಷ, ಶಚಿ ಇವರು ಬರುತ್ತಾರೆಂತಲೂ ತಿಳಿಯುತ್ತಾರೆ. ಅವರು ಇದರಂತೇ ಉಳಿದ ಜೀವಗಳಲ್ಲಾದರೂ ತಾರತಮ್ಯವನ್ನು ಸ್ವಾಭಾವಿಕವಾಗಿ ಕಲ್ಪಿಸುತ್ತಾರೆ.

ಮಾಧ್ವರು ಋಕ್, ಯಜು, ಸಾಮ, ಅಥರ್ವ, ಮಹಾಭಾರತ, ಪಂಚರಾತ್ರಾಗಮ, ಮೂಲರಾಮಾಯಣ ಈಯೇಳು ಗ್ರಂಥಗಳು ಪ್ರಮಾಣವೆಂದು ತಿಳಿಯುತ್ತಾರೆ. ಇವುಗಳಿಗನುಕೂಲವಾದ ವಚನಗಳೇ ಶಾಸ್ತ್ರವೆಂತಲೂ, ಅವೇ ಗ್ರಾಹ್ಯವೆಂತಲೂ, ಇವುಗಳಲ್ಲಿ ಹೇಳಿದ ಮಾತುಗಳು ಪದ್ಧತಿಯೆಂತಲೂ ಅವರ ನಂಬಿಗೆಯುಂಟು.

ಮಾಧ್ವರ ಮುಖ್ಯಮಠಗಳು ೩ :—ಸೋಸಿಲೆಯಲ್ಲಿರುವ ವ್ಯಾಸರಾಯಸ್ವಾಮಿಗಳ ಮಠವು, ನಂಜನಗೂಡಿನಲ್ಲಿರುವ ರಾಘವೇಂದ್ರಸ್ವಾಮಿಗಳ ಮಠವು, ಮತ್ತು ಹೊಳೆನರಸಿಪುರದಲ್ಲಿರುವ ಉತ್ತರಾಧಿಮಠವು. ಇವುಗಳ ಹೊರತು ಉಡುಪಿಯ ಸಂಬಂಧದ ಎಂಟು ಮಠಗಳು ಬೇರೆ ಇರುತ್ತವೆ. ಅವುಗಳಾವವೆಂದರೆ :—೧ ಮಜ್ಜಿಗಿಹಳ್ಳಿಮಠ, ೨ ಅಧಮಾರಮಠ, ೩ ಕೃಷ್ಣಾಪುರಮಠ, ೪ ಪುತ್ತಿಗಿಮಠ, ೫ ಶಿರೂರಮಠ, ೬ ಸವದಿಮಠ, ೭ ಕಾಣೂರಮಠ, ೮ ಪೇಜಾವರಮಠ.

ಈಗಿನ ಮಾಧ್ವರಿಗೂ ಸ್ಮಾರ್ತರಿಗೂ ಬಹಳ ಹೆಚ್ಚು ಕಡಮೆಯಿಲ್ಲ. ಮಾಧ್ವರು ಧನ್ಯವಾದ ಮುದ್ರೆಗಳನ್ನೂ ಊರ್ಧ್ವವಾದ ನಾಮವನ್ನೂ ಅಂಗಾರವನ್ನೂ ಹಚ್ಚಿಕೊಳ್ಳುತ್ತಾರೆ, ಮತ್ತು ಸ್ಮಾರ್ತರು ಅಷ್ಟಗಂಧವನ್ನು ಹಚ್ಚಿಕೊಳ್ಳುತ್ತಾರೆ. ಮಾಧ್ವರು ಎರಡನೆಯ ಏಕಾದಶಿಯನ್ನು ಮಾಡಿ, ದ್ವಾದಶಿಯ ದಿವಸ ಬೆಳಿಗ್ಗೆ ಊಟಮಾಡುತ್ತಾರೆ, ಮತ್ತು ಸ್ಮಾರ್ತರು ಏಕಾದಶಿಯು ಒಂದು ವ್ರತವೆಂದು ತಿಳಿದು, ಬೇಕಾದವರು ಮಾಡಬಹುದೆಂದು ಪ್ರತಿಪಾದಿಸುತ್ತಾರೆ. ಮಾಧ್ವರು ಏಕಾದಶಿಯು ಶ್ರಾದ್ಧಕ್ಕಿಂತ ಹೆಚ್ಚಿನದೆಂದೆಣಿಸಿ, ಏಕಾದಶಿಯ ದಿವಸ ಬಂದ ಶ್ರಾದ್ಧವನ್ನು ದ್ವಾದಶಿಯ ದಿವಸ ಮಾಡುತ್ತಾರೆ; ಆದರೆ ಸ್ಮಾರ್ತರು ಏಕಾದಶಿಯ ಶ್ರಾದ್ಧವನ್ನು ಅದೇ ದಿವಸ ತಪ್ಪದೆ ಮಾಡುತ್ತಾರೆ. ಸ್ಮಾರ್ತರು ವೇದಾಧ್ಯಯನಕ್ಕೆ ಮೆಚ್ಚಿರುತ್ತಾರೆ, ಆದರೆ ಮಾಧ್ವರು ನ್ಯಾಯ-ಕಾವ್ಯಗಳನ್ನು ಹೆಚ್ಚಾಗಿ ಕಲಿಯುತ್ತಾರೆ. ಸ್ಮಾರ್ತರು ಶಿವ-ವಿಷ್ಣುವಿನಲ್ಲಿ ಭೇದವನ್ನು ಕಲ್ಪಿಸುವದಿಲ್ಲ, ಆದರೆ ಮಾಧ್ವರು ಶಿವನು ಕಡಮೆಯ ತರಗತಿಯ ದೇವರೆಂದು ನಂಬುತ್ತಾರೆ. ಶಿವರಾತ್ರಿ-ರಾಮನವಮಿಗಳಲ್ಲಿ ಸ್ಮಾರ್ತರು ಉಪವಾಸಮಾಡುತ್ತಾರೆ; ಆದರೆ ಮಾಧ್ವರು ಆದಿವಸ ಮಿಷ್ಟಾನ್ನಭೋಜನವ ಮಾಡುತ್ತಾರೆ. ಸ್ವಭಾವದಿಂದ ಮಾಧ್ವರು ಡಾಂಭಿಕರೂ ವಾಚಾಲರೂ ಸಾಹಸಿಗಳೂ ಇರುತ್ತಾರೆ; ಆದರೆ ಸ್ಮಾರ್ತರು ಮುಖದುರ್ಬಲರೂ ಅಲ್ಪಸಂತೋಷಿಗಳೂ ನಿಷ್ಕಪಟಿಗಳೂ ಮೋಸಗೊಳ್ಳುವವರೂ ಇರುತ್ತಾರೆ.

---

# ೬ ಬಸವೇಶ್ವರ.

೧೨ನೆಯ ಶತಕದ ಮಧ್ಯದ ಸುಮಾರಕ್ಕೆ ವಿಜಾಪುರದ ಜಿಲ್ಲೆಯಲ್ಲಿನ್ನ ಬಾಗೇವಾಡಿಯೆಂಬೂರಲ್ಲಿ ಲಿಂಗಾಯತ-ಮತಸ್ಥಾಪಕನಾದ ಬಸವನು ಹುಟ್ಟಿದನು. ಇವನು ಒಬ್ಬ ಆರಾಧ್ಯಬ್ರಾಹ್ಮಣನ * ಮಗನು. ಇವನ ತಾಯಿಯ ಹೆಸರು ಮಾದಲಾಂಬಿಕೆ. ಆಕೆಯು

---

* ಬಸವನ ತಂದೆಯ ಹೆಸರು [illegible]ಯೆಂದು ತೋರುತ್ತದೆ. ಬಸವ ಪುರಾಣ ೪ನೆಯ ಸಂಧಿ ೧೦ನೆಯ ಶ್ಲೋಕವನ್ನು ನೋಡಿ

ಊರಿನಲ್ಲಿ ಬಸವನು ೭ ವರುಷ ಇದ್ದನಂತೆ. ಇವನಿಗೆ ಚಿಕ್ಕಂದಿನಲ್ಲೇ ತನ್ನ ಹೊಸಮತದ ವಿಚಾರಗಳು ತೋರಹತ್ತಿದವಂತೆ. ಆದ್ದರಿಂದ ಇವನು ೮ ವರ್ಷದವನಾದಾಗ ತನ್ನ ತಂದೆಯು ಮುಂಜಿ ಮಾಡಬೇಕೆಂಬ ವಿಚಾರದಲ್ಲಿರುವಾಗ ಮನೆಯನ್ನು ಬಿಟ್ಟು ಕಲ್ಯಾಣದಲ್ಲಿ † ಭಂಡಾರಗಾರನಾದ **ಬಲದೇವನೆಂಬ** ತನ್ನ ಸೋದರ-ಮಾವನ ಮನೆಗೆ ಓಡಿ ಹೋಗಿ ‡ ಮುಂದೆ ಕೆಲವು ದಿವಸಗಳಾದ ಬಳಿಕ ಅವನ ಮಗಳಾದ **ಗಂಗಾದೇವಿ** (ಗಂಗಲಾಂಬೆ) ಯನ್ನು ಮದುವೆಮಾಡಿಕೊಂಡು, ಅಲ್ಲಿಂದ **ಸಂಗಮೇಶ್ವರಕ್ಕೆ** ಹೋಗಿ, ಅಲ್ಲಿ ವೀರಶೈವಮತದ ದೀಕ್ಷೆಯನ್ನು ತೆಗೆದುಕೊಂಡು, ತಿರುಗಿ ಕಲ್ಯಾಣಕ್ಕೆ ಬಂದನು. *

---

† ಕಲ್ಯಾಣವು ನಿಜಾಮನ ರಾಜ್ಯದಲ್ಲಿ ಒಂದು ಪಟ್ಟಣವಿರುತ್ತದೆ.

‡ ಈ ಕಾಲಕ್ಕೆ ಬಸವನು ತನ್ನ ತಂದೆಗೆ ಹೇಳಿದ್ದೇನಂದರೆ:— ಅಪ್ಪಾ ಶಿವದೀಕ್ಷೆ ಇಲ್ಲದವರಿಗೆ ಮಾತ್ರ ಮುಂಜಿಯನ್ನು ಮಾಡುವದು ವಿಹಿತವು. ನಾನು ಹುಟ್ಟಿದ ಕೂಡಲೆ ಸಂಗಮೇಶ್ವರನು ಬಂದು, ನನಗೆ ಶಿವಾಚಾರಮಾರ್ಗದಲ್ಲಿ ಉಪದೇಶಮಾಡಿ ಹೋದನು. ಉತ್ತಮಗುರುವಿನ ಪಾದಕ್ಕೆರಗಿದ ನನಗೆ ಪೂರ್ವಜನ್ಮದ ಜ್ಞಾನವಿಲ್ಲದ ಬ್ರಾಹ್ಮಣರಿಗೆ ನಮಿಸುವದು ಸರಿಯಲ್ಲ. ಪಾಪಹರನಾದ ಶಿವನ ಮಂತ್ರ ಜಪಿಸುವ ನನಗೆ ಉಳಿದ ಮಂತ್ರಗಳನ್ನು ಜಪಿಸುವದು ತಕ್ಕುದೆ? ಬ್ರಹ್ಮಕರ್ಮವು ಶಿವಭಕ್ತಿಯು ಇವುಗಳೆರಡೂ ಭಿನ್ನವಾಗಿರುತ್ತವೆ. ಇವೆರಡರ ದೇವತೆಗಳೂ ಮಂತ್ರಗಳೂ ವೇಷಗಳೂ ಆಚಾರಗಳೂ ಬೇರೆ ಬೇರೆಯಾಗಿರುತ್ತವೆ. ಬ್ರಾಹ್ಮಣನಾಗುವದು ಕರ್ಮಮಾರ್ಗವು. ಆದರೆ ಶಿವಭಕ್ತಿಯನ್ನು ಚರಿಸುವದು ಮುಕ್ತಿಮಾರ್ಗವು. ನಾನಾತರದ ದೇವತೆಗಳನ್ನೂ ಬ್ರಾಹ್ಮಣರನ್ನೂ ಅರ್ಚಿಸುವ ಬ್ರಾಹ್ಮಣ್ಯವು ಬೆಲೆವೆಣ್ಣಿನಂತೆಯೂ ಶಿವಭಕ್ತಿಯು ಕುಲಸತಿಯಂತೆಯೂ ಇರುತ್ತವೆ. ಪೂರ್ವಕಾಲದಲ್ಲಿ ಗೌತಮ ಭೃಗು ದಧೀಚಿ ವ್ಯಾಸ ಮುನಿಗಳು ಬ್ರಾಹ್ಮಣರಿಗೆ ಶಾಪಕೊಡಲಿಲ್ಲವೇ?

* ಈ ಕಾಲಕ್ಕೆ ಬಸವನು ಬಂದು, ಶಿಲಾಲೇಖನವನ್ನೋದಿ ಬಿಜ್ಜಳನ ಸಿಂಹಾಸನದ ಕೆಳಗೆ ಹೇರಳ ಹಣವಿರುತ್ತದೆಂದು ಅರಸನಿಗೆ ಹೇಳಿದನಂತೆ. ಅದರಂತೆ ಸಿಂಹಾಸನದ ಬುಡದಲ್ಲಿ ಅಗಿಸಿ ನೋಡಲು, ಹಣ ಸಿಕ್ಕಿತು. ಆದ್ದರಿಂದ ಬಿಜ್ಜಳನು ಅವನ ಮೇಲೆ ಪ್ರೀತಿಮಾಡಹತ್ತಿದನಂತೆ.

ಬಸವನಿಗೆ ಪದ್ಮಾವತಿಯೆಂಬವಳೊಬ್ಬ ಬಲುಚೆಲುವೆಯಾದ ತಂಗಿ ಇದ್ದಳು. ಆಕಾಲಕ್ಕೆ ಕಲಚೂರ್ಯ ಮನೆತನದವನಾದ ಬಿಜ್ಜಳನೆಂಬ ಜೈನಜಾತಿಯ ಅರಸನು ಕಲ್ಯಾಣದಲ್ಲಿ ಆಳುತ್ತಿದ್ದನು, (೧೧೫೬-೧೧೬೫). ಅವನು ಪದ್ಮಾವತಿಯ ಅಂದ-ಚಂದ-ಬೆಡಗನ್ನು ನೋಡಿ, ಆಕೆಗೆ ಮನಸೋತು, ಬಸವನ ಸಹಾಯದಿಂದ ಆಕೆಯನ್ನು ಮದುವೆಮಾಡಿಕೊಂಡನು. ಮುಂದೆ ಕಾಮಾಂಧನಾದ ಬಿಜ್ಜಳನು ಪದ್ಮಾವತಿಯ ಮೋಹಪಾಶದಲ್ಲಿ ಸಿಲ್ಕಿ, ಸಿವಾಜಿಯ ಮೊಮ್ಮಗನಾದ ಶಾಹುವು ಬಾಳಾಜಿ ವಿಶ್ವನಾಥನಿಗೆ ರಾಜ್ಯಭಾರವನ್ನೊಪ್ಪಿಸಿದಂತೆ, ಬಸವನಿಗೆ ಎಲ್ಲ ರಾಜ್ಯದಾಡಳತವನ್ನೊಪ್ಪಿಸಿ, ತಾನು ಪದ್ಮಾವತಿಯ ಅರಮನೆಯಲ್ಲಿ ಕಾಲಕಳೆಯಲಾರಂಭಿಸಿದನು.

ಈಕಾಲಕ್ಕೆ ಬಸವನ ಅಧಿಕಾರಕ್ಕೆ ಕುಂದಿದ್ದಿಲ್ಲ; ಅವನ ವೈಭವಕ್ಕೆ ಕೊರತೆಯಿದ್ದಿಲ್ಲ; ಅವನ ಸಿರಿಗೆ ಎಣೆಯಿದ್ದಿಲ್ಲ. ಅವನು ಮಾಡಿದ್ದೇ ಮಟ್ಟ, ಕಟ್ಟಿದ್ದೇ ಪಟ್ಟವಾಗಿತ್ತು. ಆದರೂ ಮೇಲೆ ಹೇಳಿದ ಬಾಳಾಜಿ ವಿಶ್ವನಾಥನಂತೆ ಅವನು ತನ್ನಧಿಕಾರ-ಸಂಪತ್ತುಗಳನ್ನು ಸ್ವಾರ್ಥಕ್ಕೆ ಉಪಯೋಗಿಸಲಿಲ್ಲೆಂಬ ಸಂಗತಿಯು ಮಹತ್ವದ್ದೇ ಸರಿ. ಬಾಳಾಜಿಯಂತೆ ಅವನು ತನ್ನದೊಂದು ರಾಜಮನೆತನವನ್ನು ಸ್ಥಾಪಿಸಿದ್ದರೆ, ಪೇಶ್ವೆಯರಂತೆ ಬಸವನ ರಾಜ್ಯವಾದರೂ ನಿರ್ಮಾಣವಾಗಬಹುದಾಗಿತ್ತು. ಆದರೆ ಬಸವನು ಈತರದ ಸ್ವಾರ್ಥಸಾಧನದ ವಿಚಾರವಮಾಡದೆ, ತನ್ನ ದೇಶಬಾಂಧವರು ಸದ್ಗುಣಿಗಳೂ ಸದಾಚಾರಿಗಳೂ ದೇವರಲ್ಲಿ ಭಕ್ತಿಯುಳ್ಳವರೂ ಆಗಿ, ಇಹಪರಗಳಲ್ಲಿ ಸೌಖ್ಯ-ಪಡೆಯಬೇಕೆಂದು ಇಚ್ಛಿಸಿದನು. ಈವುದ್ದೇಶವನ್ನು ನೆರವೇರಿಸಲಿಕ್ಕೆ ಅವನು ಹಲವು ಕಷ್ಟಗಳನ್ನನುಭವಿಸಿದ್ದಲ್ಲದೆ, ಕಟ್ಟಕಡೆಗೆ ಪ್ರಾಣವನ್ನಾದರೂ ಕೊಟ್ಟನು. ಇದರಿಂದಲೇ ಅವನ ಜಸವು ಈನಾಡಿನಲ್ಲಿ ಹಬ್ಬಿತು; ಮತ್ತು ಅವನ ಹೆಸರು ಲಿಂಗಾಯತಮತವಿರುವ ವರೆಗೆ ಈಜಗತ್ತಿನಲ್ಲಿ ಉಳಿಯುವದೆನ್ನಲಿಕ್ಕೆ ಅಡ್ಡಿಯಿಲ್ಲ.

ಬಸವಪುರಾಣದಲ್ಲಿ ಬಸವನು ಮಾಡಿದ ಎಷ್ಟೋ ಅದ್ಭುತಕೃತ್ಯಗಳ ವರ್ಣನೆಯುಂಟು. ಇಲ್ಲಿ ಅವುಗಳನ್ನೆಲ್ಲ ವಿವರಿಸುವದು ಅಪ್ರಸಂಗಿಕವಾದ್ದರಿಂದ ಅವುಗಳೊಳಗೆ ಮುಖ್ಯವಾದವುಗಳನ್ನು ತುಸು ಧರಲ್ಲಿ ಬರೆಯುವೆವು:—

೧. ಬಸವನು ಬಂಡಾರಗಾರನಿದ್ದಾಗ ಕಯ್ಗೆ ಸಿಕ್ಕ ಹಣವನ್ನು ಜಂಗಮರಿಗೆ ಕೊಡಲಾರಂಭಿಸಿದನು. ಉಳಿದ ಸರದಾರರು ಈ ಸುದ್ದಿಯನ್ನು ಅರಸನಿಗೆ ತಿಳಿಸಲು, ಅವನು ಸಿಟ್ಟಿಗೆದ್ದು ಬಸವನನ್ನು ಅಕಸ್ಮಾತ್ತಾಗಿ ಕರೆಸಿ, ಬಂಡಾರದ ಹಣದ ಲೆಕ್ಕವನ್ನು ಒಪ್ಪಿಸಲಿಕ್ಕೆ ಹೇಳಿದನು. ಕೂಡಲೆ ಬಸವನು ಬಂಡಾರದ ಕೀಲಿಕಯ್ಗಳನ್ನು ಅರಸನ ಮುಂದಿಟ್ಟು, ಹಣದ ಲೆಕ್ಕವನ್ನು ಪಯ್ಗೆಪಯ್ ಒಪ್ಪಿಸಿದನು.

೨. ಕಲ್ಯಾಣದಲ್ಲಿದ್ದ ಒಬ್ಬ ಜಂಗಮನ ಸೂಳೆಯು ಬಸವನ ಹೆಂಡತಿಯ ಬೆಲೆಯುಳ್ಳ ಉಡಿಗೆಯ ಸುದ್ದಿಯನ್ನು ಕೇಳಿ, ಅವುಡಿಗೆಯೇ ತನಗೆ ಬೇಕೆಂದು ಹಟಮಾಡಲು, ಆ ಜಂಗಮನು ಬಸವನ ಮನೆಗೆ ಹೋಗಿ, ತಾನು ಬಂದ ಕಾರಣವನ್ನು ತಿಳಿಸಿದನು. ಕೂಡಲೆ ಬಸವನು ಗಂಗಲಾಂಬೆಯನ್ನು ಅಲ್ಲೇ ಕರಿಸಿ, ಆಕೆಯ ಅರಿವೆಯನ್ನು ಸೆಳೆಸೆಳೆದಹಾಗೆ ಅದೇ ತರದ ಹೊಸ ಉಡಿಗೆಗಳು ಆಕೆಯ ಮಯ್ಮೇಲೆ ಕಾಣಿಸಿದವು. ಆಗ ಆ ಜಂಗಮನು ಬಸವನು ಸೆಳೆದ ಸಾವಿರಾರು ಉಡಿಗೆಗಳನ್ನು ತೆಗೆದುಕೊಂಡು ಹೋಗಿ, ತನ್ನ ನಲ್ಲೆಗೆ ಕೊಟ್ಟನು.†

೩. ಮಹಾದೇವ ಮಾಚಯ್ಯನೆಂಬೊಬ್ಬ ಶಿವಭಕ್ತನು ಒಂದು ಕೂಸನ್ನು ಕೊಲ್ಲಲು, ಬಿಜ್ಜಳನು ಅವನನ್ನು ಹಿಡಿಸಿ, ದಂಡಿಸಲಿಕ್ಕೆ ಬಸವನಿಗೆ ಹೇಳಿದನು. ಬಸವನು ಅದು ಆಗದ ಕೆಲಸವೆಂದು ಹೇಳಲು, ಬಿಜ್ಜಳನು ಬೇರೆ ಜನರನ್ನು ಕಳಿಸಿ, ಮಾಚಯ್ಯನನ್ನು ಹಿಡಿತರಿಸಿ, ಅವನನ್ನು ಆನೆಯ ಕಾಲಿಗೆ ಕಟ್ಟಿಸಿ, ಕೊಲ್ಲಿಸಬೇಕೆಂದು ಅಪ್ಪಣೆಮಾಡಿದನು. ರಾಜದೂತರು ಹಾಗೆ ಮಾಡಲಿಕ್ಕೆ ಹೋಗಲು, ಮಾಚಯ್ಯನು ಆನೆಯನ್ನು ಸೊಂಡೆಯಿಂದ ಹಿಡಿದು ನೆಲಕ್ಕಪ್ಪಳಿಸಿ ಕೊಂದುದಲ್ಲದೆ, ಅದರ ಸಂಗಡಲಿದ್ದ ಜನರನ್ನು ಹೊಡೆದು ಕೆಡವಿದನು. ಬಳಿಕ ಅವನು ಬಿಜ್ಜಳನನ್ನು ವಧಿಸಲಿಕ್ಕೆ ಅರಮನೆಗೆ

† ಈ ಉದಾಹರಣೆಯ ಸಂಬಂಧದಿಂದ ಭಕ್ತಿಪರರಾದ ಲಿಂಗಾಯತರು ಏನೇ ಹೇಳಲೊಲ್ಲರೇಕೆ. ಈ ಜಂಗಮನು ಸೂಳೆಯನ್ನಿಟ್ಟುಕೊಂಡುದೊಂದು ಅನಾಚಾರವು ಮತ್ತು ಬಸವನು ಸೀರೆಯನ್ನು ಸೆಳೆದ್ದೊಂದು ಅವಿಚಾರವೆನ್ನಲಿಕ್ಕೆ ಅಡ್ಡಿಯಿಲ್ಲ. ದ್ರೌಪದಿಯ ವಸ್ತ್ರಹರಣದಿಂದ ಬಸವಪುರಾಣ ಬರೆದ ಭೀಮಕವಿಯ ಮನಸ್ಸಿನಲ್ಲಿ ಈ ಕಲ್ಪನೆಯು ಬಂದಿದ್ದರೂ ಬಂದಿರಬಹುದು.

ಹೋಗಲು, ಬಿಜ್ಜಳನು ಹೆದರಿ ಬಸವನನ್ನು ಕರಿಸಿದನು. ಆಗ ಬಸವನು ಬಂದು ಮಾಚಯ್ಯನಿಗೆ ಪರಿಪರಿಯಿಂದ ಹೇಳಿ, ಅವನನ್ನು ಸಮಾಧಾನಪಡಿಸಿ, ಬಿಜ್ಜಳನನ್ನು ಉಳಿಸಿದನು.

೪. ಬಿಜ್ಜಳನು ಜೈನನಾದ್ದರಿಂದ ಅವನು ವೀರಶೈವಮತಕ್ಕೊಡಂಬಡಲಿಲ್ಲ. ಆದ್ದರಿಂದ ಒಂದು ದಿನ ಬಸವನ ಶಿಷ್ಯನಾದ ಏಕಾಂತ ರಾಮಯ್ಯನೆಂಬವನು ಬಿಜ್ಜಳನ ಮುಂದೆ ತನ್ನ ತಲೆಯನ್ನು ಕಡಿದಿಟ್ಟು, ೫ ದಿವಸಗಳ ವರೆಗೆ ಗ್ರಾಮಪ್ರದಕ್ಷಿಣೆಯನ್ನು ಮಾಡಿ, ೬ನೆಯ ದಿವಸ ಅರುಂಡವನ್ನು ಹಚ್ಚಿಕೊಂಡನಂತೆ.

ಬಸವನು ತನ್ನಧಿಕಾರ-ಸಂಪತ್ತನ್ನು ತನ್ನ ಹೊಸ ಮತದ ತತ್ವಗಳನ್ನು ಹಬ್ಬಿಸಲಿಕ್ಕೆ ಉಪಯೋಗಿಸಿದ್ದನ್ನು ಕಂಡು, ಕೋಪದಿಂದ ಅರವುಗೆಟ್ಟ ಬಿಜ್ಜಳನು ಎಚ್ಚತ್ತು, ಬಸವನನ್ನು ಹಿಡಿದು ಕಾವಲಲ್ಲಿಡಲಿಕ್ಕೆ ಯತ್ನ-ನಡಿಸಿದನು. ಈಸುದ್ದಿಯನ್ನು ಕೇಳಿ ಬಸವನು ಓಡಿಹೋದ್ದರಿಂದ, ಬಿಜ್ಜಳನು ಅವನನ್ನು ಹಿಡಿಯಲಿಕ್ಕೆ ಒಂದು ದಂಡು-ಕಳುಹಿದನು. ಬಸವನ ಸಂಗಡಿಗರು ಆದಂಡನ್ನು ಸೋಲಿಸಿ, ಅಟ್ಟಿದ್ದರಿಂದ, ಬಿಜ್ಜಳನು ತಾನೇ ದಂಡು-ತಕ್ಕೊಂಡು ಅವನ ಮೇಲೆ ನಾಗಿ ಹೋದನು. ಆಗ ಬಸವನು ಅವನನ್ನು ನೆರೆ ಸೋಲಿಸಿದ್ದರಿಂದ, ಅವನು ನಿರುಪಾಯನಾಗಿ ಬಸವನನ್ನು ಮತ್ತೆ ತನ್ನ ಮಂತ್ರಿಯನ್ನು ಮಾಡಿಕೊಂಡನು. ಆದರೆ ಅವರಿಬ್ಬರ ನಡುವೆ ನಂಬಿಗೆಯು ಹಾರಿತ್ತು. ಬಸವನು ಜೈನಮತವನ್ನು ಮೂಲೆಗೊತ್ತಿ ಲಿಂಗಾಯತಮತವನ್ನು ಬೆಳಿಸುವನೆಂದು ಬಿಜ್ಜಳನಿಗೆ ಗೊತ್ತಿತ್ತು, ಮತ್ತು ಬಿಜ್ಜಳನು ಲಿಂಗಾಯತ-ಮತಕ್ಕೆ ಪ್ರತಿಕೂಲನಿರುತ್ತಾನೆಂತಲೂ ಹೊತ್ತುಸಾಧಿಸಿ ತನಗೆ ಬಲಿಹಾಕುವದು ನಿಶ್ಚಯವೆಂತಲೂ ಬಸವನು ಚೆನ್ನಾಗಿ ಅರಿತಿದ್ದನು. ಇಂತು ಮನಸ್ತಾಪವಿದ್ದುದರಿಂದ ಅವರು ಕೂಡಿ ನಡೆಯುವ ಬಗೆಯಾವದು?

ಹೀಗೆ ಹಲವು ಹಗಲು ಹೋಗಲು, ಅವರ ಹಗೆತನವು ಹೆಚ್ಚಿತು. ಇಬ್ಬರೂ ತಮ್ಮ ಮನೋಗ್ರಂಥವನ್ನು ಬಿಡದ್ದರಿಂದ, ಕೂಡಿ ನಡೆಯುವದು ಅಸಂಭವವೆಂದು ಕೂಡಲೆ ಕಂಡುಬಂತು. ಬಸವನು ಬಿಜ್ಜಳನನ್ನು ಕೊಲ್ಲಿಸಿ, ಪದ್ಮಾವತಿಯ ಚಿಕ್ಕ ಮಗುವನ್ನು ಪಟ್ಟದ ಮೇಲೆ ಕುಳ್ಳಿರಿಸಿ, ನಾನು ಆಹುಡುಗನ ರಕ್ಷಕನಾಗಿ ಲಿಂ

ಗಾಯತ-ಮತವನ್ನು ಹಬ್ಬಿಸಬೇಕೆಂದು ನಿಶ್ಚಯಮಾಡಿದನು. ಆದರೆ ಅವನು ಬಿಜ್ಜಳನನ್ನು ಹೇಗೆ ಕೊಲ್ಲಿಸಿದನೆಂಬದು ನಿಶ್ಚಯವಾಗಿ ತಿಳಿಯುವದಿಲ್ಲ. ಏಕೆಂದರೆ ಬಿಜ್ಜಳಾಂಕ-ಕಾವ್ಯವೆಂಬ ಜೈನ-ಗ್ರಂಥದಲ್ಲಿ ಬಿಜ್ಜಳನು ಕೊಲ್ಹಾಪುರದ ಸಿಲಹರ ಅರಸನನ್ನು ಸೋಲಿಸಿ, ತಿರುಗಿ ಬರುವಾಗ ವಿಷಹಾಕಿ ಕೊಲ್ಲಲ್ಪಟ್ಟನೆಂದು ಬರೆದದೆ. ಬಸವಪುರಾಣವೆಂಬ ಲಿಂಗಾಯತರ ಮತಗ್ರಂಥದಲ್ಲಿ ಬಸವನ ಮೂರು ಮಂದಿ ಸಂಗಡಿಗರು ಬಿಜ್ಜಳನನ್ನು ಒಮ್ಮಿಂದೊಮ್ಮೆ ಹೊಡೆದು ಕೊಂದರೆಂದು ಲೇಖವದೆ.*

---

* ಅಲ್ಲಯ್ಯಾ ಮಾಧವಯ್ಯಾ ಎಂಬವರಿಬ್ಬರು ಬಸವನ ಪ್ರೀತಿಯ ಶಿಷ್ಯರಿದ್ದರು. ಅವರು ಆವಾಗಲೂ ಬಸವನ ಸಂಗಡಲೇ ಇರುತ್ತಿದ್ದರು. ಒಂದು ದಿನ ಬಿಜ್ಜಳನು ಅವರ ವಿರುದ್ಧ ಚಾಡಿಯನ್ನು ಕೇಳಿ ಸಿಟ್ಟಿಗೆದ್ದು, ಅವರ ಕಣ್ಣುಗಳನ್ನು ಕೀಳಿಸಿದನು. ಆಗ ಬಸವನು ಮುನಿದು ಕಲ್ಯಾಣವನ್ನು ಬಿಟ್ಟು ತನ್ನ ಸಂಗಡಿಗರೊಡನೆ ಸಂಗಮೇಶ್ವರಕ್ಕೆ ಹೋದನು. ಕಲ್ಯಾಣದಲ್ಲಿ ಉಳಿದ ಬಸವನ ಶಿಷ್ಯರೊಳಗೆ ಜಗದೇವನೆಂಬವನು ತನ್ನ ಮನೆಗೆ ಹೋಗಲು, ಅವನ ತಾಯಿಯು ಅವನನ್ನು ಮನೆಯೊಳಗೆ ಬರಗೊಡದೆ, ಅಂದುದೇನೆಂದರೆ ವೀರಶೈವ-ಮತದವರಿಗೆ ಅನ್ಯಾಯದಿಂದ ಕ್ರೂರ-ಶಿಕ್ಷೆಯಾಗಿದ್ದೂ ಸುಮ್ಮನೇ ಕೂಡ್ರುವದು ನಿನಗೆ ತಕ್ಕುದೇ? ದಕ್ಷನು ತಾನು ಮಾಡಿದ ಯಜ್ಞದಲ್ಲಿ ಶಿವನಿಗೆ ಹವಿರ್ಭಾಗವನ್ನು ಕೊಡದ್ದನ್ನು ನೋಡಿ, ಪಾರ್ವತಿಯು ಯಜ್ಞಕುಂಡದಲ್ಲಿ ಹಾರಿಕೊಂಡು ಪ್ರಾಣಕೊಡಲಿಲ್ಲವೆ? ನೀನು ಈಯನ್ಯಾಯದ ಸೂಡುತೆಗೆದುಕೋ, ಇಲ್ಲವೆ ಆ ಪ್ರಯತ್ನದಲ್ಲಿ ಸಾಯಿ. ಸೂಡು-ತೆಗೆದುಕೊಳ್ಳುವದಕ್ಕಿಂತ ಜೀವವೇ ನಿನಗೆ ಹೆಚ್ಚು ಬೆಲೆಯುಳ್ಳದ್ದಾದರೆ, ನೀನು ನನ್ನ ಮಗನಲ್ಲ ಮತ್ತು ನಾನು ನಿನ್ನ ತಾಯಿಯಲ್ಲ. ಆಕೆಯು ಹೀಗೆ ಅವನನ್ನು ಹುರಿದುಂಬಿಸಿ, ಬಾಗಿಲಿನ ಹೊರಗೇ ಅವನಿಗೆ ಕೂಳುಹಾಕಿ ಅಟ್ಟಿದಳು. ಬಳಿಕ ಅವನು ಮಲ್ಲಯ್ಯ-ಬೊಮ್ಮಯ್ಯರೆಂಬಿಬ್ಬರು ವೀರಶೈವರನ್ನೊಡಗೂಡಿ, ಮೈಯ್ಗೆಲ್ಲ ಭಸ್ಮ ಸವರಿಕೊಂಡು, ಬರ್ಚಿ-ಕತ್ತಿ-ಡಾಲುಗಳನ್ನು ಹಿಡಿದುಕೊಂಡು, ಅರಮನೆಗೆ ಹೊರಟನು. ಹಾದಿಯಲ್ಲಿ ಒಂದು ಎತ್ತು ಬಂತು. (ಈಯೆತ್ತು ಬಸವನ ಅವತಾರವೆಂದು ಲಿಂಗಾಯತರು ತಿಳಿಯುತ್ತಾರೆ). ಈಯೆತ್ತು ಹಾದಿಯಲ್ಲಿ ಸಿಕ್ಕವರನ್ನಿರಿದು, ಬಿಜ್ಜಳನ ರಾಜಸಭೆಯಲ್ಲೆಲ್ಲ ಹಾಹಾಕಾರ ಹುಟ್ಟಿಸಿತು. ಈಗದ್ದಲದಲ್ಲಿ ಜಗದೇವ-ಮಲ್ಲಯ್ಯಾ-ಬೊಮ್ಮಯ್ಯರು ಬಿಜ್ಜಳನನ್ನು ಕೊಂದರು.

ಆದರೆ ಇಷ್ಟರಿಂದಲೇ ಈಬಡಿದಾಟವು ಮುಗಿಯಲಿಲ್ಲ. ಬಿಜ್ಜಳನ ಮಗನಾದ ರಾಯಮುರಾರಿ ಸ್ವಾಮಿಯು ತನ್ನ ತಂದೆಯ ಕೊಲೆಯ ಬಗ್ಗೆ ಸೂಡುತಕ್ಕೊಳ್ಳಬೇಕೆಂದು ನಿಶ್ಚಯಿಸಿದನು. ಈಸುದ್ದಿಯನ್ನು ಕೇಳಿ, ಬಸವನು ಕನ್ನಡ-ಜಿಲ್ಲೆಯೊಳಗೆ ಸುಪೆ ತಾಲೂಕಿನಲ್ಲಿದ್ದ ಉಳವಿಗೆ (ವೃಷಭಪುರಕ್ಕೆ) ಓಡಿ ಹೋದನು. ರಾಯಮುರಾರಿಸ್ವಾಮಿಯು ಅವ್ರಾರನ್ನೇ ಮುತ್ತಿದ್ದರಿಂದ, ಬಸವನು ಮುಂದುಗಾಣದೆ, ಬಂದು ಬಾವಿಯಲ್ಲಿ ಹಾರಿಕೊಂಡು, ಪ್ರಾಣಕೊಟ್ಟನು!! ಈಗ ಉಳವಿಯಲ್ಲಿ ಬಸವನ ಗುಡಿ, ಚಿಲಮಿಕುಣ', ಅಕ್ಕನಾಗವ್ವನ ಗುಡಿ, ರುದ್ರಾಕ್ಷಿಮಂಟಪ, ಮುಂತಾದವುಗಳಿರುತ್ತವೆ. ಪ್ರತಿವರ್ಷ ಮಾಘ ಶುದ್ಧ ಪೌರ್ಣಿಮೆಯ ದಿವಸದಲ್ಲಿ ದೊಡ್ಡ ರಥೋತ್ಸವವಾಗುತ್ತದೆ. ಆಕಾಲಕ್ಕೆ ಸಾವಿರಾರು ಲಿಂಗಾಯತರು ತಂತಮ್ಮ ಹೆಂಡರು-ಮಕ್ಕಳೊಡನೆ ಬಹುಭಕ್ತಿಯಿಂದಲ್ಲಿಗೆ ಹೋಗುತ್ತಾರೆ.

ಲಿಂಗಾಯತ-ಮತ*—ಬಸವನು ಒಂದು ಬಗೆಯ ಶೈವಮತವನ್ನು ಸ್ಥಾಪಿಸಿದನು. ಅವನು ಜಾತಿಭೇದಕ್ಕೊಡಂಬಡಲಿಲ್ಲ; ವೇದ

* ಬಸವನೇ ಲಿಂಗಾಯತ-ಮತವನ್ನು ಹೊಸತಾಗಿ ಸ್ಥಾಪಿಸಿದನೆನ್ನಕೂಡದು. ಏಕೆಂದರೆ, ಈಮತವು ಶೈವಮತದ ಒಂದು ಪ್ರಕಾರವಿದ್ದು, ಶ್ರೀಮಚ್ಛಂಕರಾಚಾರ್ಯರ ಕಾಲಕ್ಕೆ ೬ ಬಗೆಯ ಶೈವಮತಗಳಿದ್ದವೆಂದು ಶಂಕರವಿಜಯದಲ್ಲಿ ಬರೆದಿರುತ್ತದೆ. ಈಯಾರು ಬಗೆಗಳಾವವೆಂದರೆ :—ವೀರಶೈವಮತ, ರೌದ್ರಮತ, ಉಗ್ರಮತ, ಭಟ್ಟಮತ, ಜಂಗಮಮತ, ಪಾಶುಪತಮತ. ವೀರಶೈವರು ಎರಡೂ ಭುಜಗಳ ಮೇಲೆ ಲಿಂಗಾಕಾರವಾದ ಬರೆಗಳನ್ನು ಕೊಟ್ಟುಕೊಳ್ಳುತ್ತಿದ್ದರು. ರೌದ್ರರು ಹಣೆಯ ಮೇಲೆ ತ್ರಿಶೂಲಾಕಾರದ ಬರೆಯನ್ನು ಕೊಟ್ಟುಕೊಳ್ಳುತ್ತಿದ್ದರು. ಉಗ್ರರು ಎರಡೂ ಭುಜಗಳ ಮೇಲೆ ಡಮರುವಿನ ಬರೆಯನ್ನು ಕೊಟ್ಟುಕೊಳ್ಳುತ್ತಿದ್ದರು. ಭಟ್ಟರು ಲಿಂಗಾಕಾರದ ಗುರುತನ್ನು ಹಣೆಯ ಮೇಲೆ ಬರೆದುಕೊಳ್ಳುತ್ತಿದ್ದರು. ಜಂಗಮರು ತ್ರಿಶೂಲವನ್ನು ತಲೆಯ ಮೇಲೆ ಇಟ್ಟುಕೊಳ್ಳುವುದಲ್ಲದೆ, ಕಲ್ಲಿನ ಲಿಂಗವನ್ನು ಮೆಯ್ಮೇಲೆ ಧರಿಸುತ್ತಿದ್ದರು. ಪಾಶುಪತರು ಎದೆ-ಹಣೆ-ಕಯ್ಯ-ಹೊಕ್ಕಳಗಳ ಮೇಲೆ ಲಿಂಗಾಕಾರದ ಬರೆಯನ್ನು ಕೊಟ್ಟುಕೊಳ್ಳುತ್ತಿದ್ದರು.

ಪ್ರಾಮಾಣ್ಯಕ್ಕೆ ಒಪ್ಪಲಿಲ್ಲ; ಮತ್ತು ಯಾತ್ರಾತಪಶ್ಚರ್ಯಗಳಿಂದ ಮುಕ್ತಿ ದೊರೆಯುತ್ತದೆಂಬ ಮಾತಿನಲ್ಲಿ ವಿಶ್ವಾಸವಿಡಲಿಲ್ಲ. ಪ್ರತಿಯೊಬ್ಬ ಲಿಂಗಾಯತನಿಗೆ ಗುರು, ಲಿಂಗ, ಜಂಗಮ ಈ ಮೂರು ಉಪಾಧಿಗಳಿರಬೇಕು; ಇಲ್ಲದಿದ್ದರೆ ಅವನು ಪವಿತ್ರನೆನಿಸುವದಿಲ್ಲ. ಲಿಂಗಾಯತರ ಗುರುಗಳು ಕೆಂಪುಗಾವಿಯ ವಸ್ತ್ರಗಳನ್ನು ಧರಿಸ ಬೇಕಲ್ಲದೆ, ಮದ್ಯಮಾಂಸ-ತಾಂಬೂಲಗಳನ್ನು ಸೇವಿಸ ಕೂಡದು. ಈ ಮತದ ಪ್ರಸಿದ್ಧಗ್ರಂಥಗಳೆಂದರೆ ಬಸವಪುರಾಣ–ಚನ್ನಬಸವಪುರಾಣಗಳು.

೧೩೯೯ರಿಂದ ೧೬೧೦ ರ ವರೆಗೆ ಮೈಸೂರಿನೊಡೆಯರೂ ೧೫೫೦ ರಿಂದ ೧೭೬೩ ರ ವರೆಗೆ ಕೆಲದಿ* ಇಕ್ಕೇರಿ† ಬಿದನೂರು‡ ಈ ಪ್ರಾಂತಗಳ ನಾಯಕರೂ ಈ ಲಿಂಗಾಯತ-ಮತದ ಅಭಿಮಾನಿಗಳಾಗಿದ್ದರು. ಈಗ ಈ ಮತದಭಿಮಾನವು ಬಹಳವಾಗಿದ್ದವರಿಗೆ ವೀರಶೈವರೆನ್ನುತ್ತಾರೆ.

* ಕೆಲದಿಯು ಮೈಸೂರ ಸಂಸ್ಥಾನದೊಳಗೆ ಶಿವಮೊಗ್ಗ ಜಿಲ್ಲೆಯಲ್ಲಿ ಸಾಗರ ತಾಲೂಕಿನೊಳಗೆ ಒಂದು ಹಳ್ಳಿ ಇರುತ್ತದೆ. ಇಲ್ಲಿ ಸುಮಾರು ೪೦೦ ವರ್ಷಗಳ ಹಿಂದೆ ಕಟ್ಟಿಸಿದ ಒಂದು ರಾಮೇಶ್ವರ-ವೀರಭದ್ರದೇವರ ಗುಡಿ ಇರುತ್ತದೆ.

† ಇಕ್ಕೇರಿಯು ಮೈಸೂರಸಂಸ್ಥಾನದೊಳಗೆ ಶಿವಮೊಗ್ಗ ಜಿಲ್ಲೆಯಲ್ಲಿಯೊಂದು ಹಳ್ಳಿ ಇರುತ್ತದೆ. ಇದು ಮೊದಲು ಕೆಲದಿಯರಸರ ರಾಜಧಾನಿಯಾಗಿತ್ತು. ಇಲ್ಲಿ ಈಗ ಅಘೋರೇಶ್ವರನದೊಂದು ಹಳೆ ಗುಡಿ ಮಾತ್ರ ಇರುತ್ತದೆ. ಇಲ್ಲಿಯ ನಾಣ್ಯಗಳು ಹೆಸರಾಗಿದ್ದವು.

‡ ಬಿದನೂರು ಅಥವಾ ನಗರವು ಮೈಸೂರ ಸಂಸ್ಥಾನದೊಳಗೆ ಶಿವಮೊಗ್ಗ ಜಿಲ್ಲೆಯಲ್ಲಿಯೊಂದು ತಾಲೂಕಿನ ಸ್ಥಳವಾಗಿರುತ್ತದೆ. ಇಕ್ಕೇರಿಯರಸರು ಇದನ್ನು ೧೬೪೦ರಲ್ಲಿ ತಮ್ಮ ರಾಜಧಾನಿಯನ್ನು ಮಾಡಿಕೊಂಡರು. ೧೭೬೩ ರಲ್ಲಿ ಹೈದರಲ್ಲಿಯು ಇದನ್ನು ಹಿಡಿದುಕೊಂಡು, ಇದಕ್ಕೆ ಹೈದರನಗರವೆಂಬ ಹೆಸರನ್ನು ಕೊಟ್ಟನು.





# ೭ ಚೈತನ್ಯ.

ಬಂಗಾಳ ಇಲಾಖೆಯಲ್ಲಿ ವೈಷ್ಣವಮತವನ್ನು ಪ್ರಚಾರಗೊಳಿಸಿದವನು ಚೈತನ್ಯನೇ ಸರಿ. ಇವನು **ನವದ್ವೀಪ**ದಲ್ಲಿ* ಹುಟ್ಟಿದನು (೧೪೮೫). ಇವನ ತಂದೆಯು **ಜಗನ್ನಾಥ-ಮಿಶ್ರನು**, ಮತ್ತು ತಾಯಿಯು ನೀಲಾಂಬರ ಚಕ್ರವರ್ತಿಯ ಮಗಳಾದ **ಶಚಿದೇವಿಯು**. **ಜಗನ್ನಾಥನು** ವೇದಾಂತಿಯಾಗಿದ್ದನು. ಇವನು ಧನವಂತನಲ್ಲದಿದ್ದರೂ ದೊಡ್ಡ ಕುಲದವನಾಗಿದ್ದನು. ಇವನು **ಸಿಲ್ಹಟ**ವೆಂಬ† ಊರಿನವನು. ಇವನ ಮಾವನ ಮನೆ ನವದ್ವೀಪದಲ್ಲಿತ್ತು. ನವದ್ವೀಪವು ಗಂಗಾನದಿಯ ಮೇಲೆ ಇರುವದರಿಂದಲೂ ಸಂಸ್ಕೃತಾಭ್ಯಾಸಕ್ಕೆ ಹೆಸರಾಗಿರುವದರಿಂದಲೂ ಜಗನ್ನಾಥನು ಇಲ್ಲಿ ಇರಲಿಕ್ಕೆ ಮನಸ್ಸುಮಾಡಿರಬಹುದು. ಇವನಿಗೆ ಎಂಟು ಮಂದಿ ಹೆಣ್ಣುಮಕ್ಕ

---

* ನವದ್ವೀಪಕ್ಕೆ ಈಗ ನದಿಯಾಯೆನ್ನುತ್ತಾರೆ. ಇದು ಬಂಗಾಳ ಇಲಾಖೆಯಲ್ಲಿ ಒಂದು ಜಿಲ್ಲೆಯ ಸ್ಥಳವಿರುತ್ತದೆ. ಇದು ಮೊದಲು ಬಂಗಾಳದ ಹಿಂದೂ ಅರಸರ ರಾಜಧಾನಿಯಾಗಿತ್ತು. ಇದೇ ಎಡೆಯಲ್ಲಿ ಹೆಸರಾದ ಪ್ಲಾಸಿ ಕಾಳಗವಾಯಿತು. ಇಲ್ಲಿ ಪ್ರತಿವರ್ಷ ಮಾಘಮಾಸದಲ್ಲಿ ಚೈತನ್ಯನ ಜಾತ್ರೆಯಾಗುತ್ತದೆ.

* ಸಿಲ್ಹಟವು ಅಸಾಮುಪ್ರಾಂತದಲ್ಲಿಯೊಂದು ಜಿಲ್ಲಾ ಪಟ್ಟಣವಿರುತ್ತದೆ. ಪೂರ್ವಕಾಲದಲ್ಲಿ ಇಲ್ಲಿ ಗೌರ, ಲೌರ, ಜಯಂತಿ ಎಂಬ ಮೂರು ಸಂಸ್ಥಾನಗಳಿದ್ದವು. ೧೪ನೆಯ ಶತಮಾನದಲ್ಲಿ ಗೌರವು ಮುಸಲ್ಮಾನರ ಕಯ್ಸೇರಿತು; ಮುಂದಿನ ಶತಮಾನದಲ್ಲಿ ಲೌರವು ಅಕಬರನ ಅಧಿಕಾರಕ್ಕೊಳಗಾದಿತು. ಮುಂದೆ ೧೮೩೫ರಲ್ಲಿ ಇಂಗ್ಲಿಷರು ತಮ್ಮ ಪ್ರಜೆಗಳಲ್ಲಿ ಕೆಲವರನ್ನು ಕಾಳಮ್ಮಗೆ ಬಲಿಕೊಟ್ಟ ಪ್ರಕರ್ಣದಲ್ಲಿ ಜಯಂತಿಯರಸನ ಅಂಗವಿರುತ್ತದೆಂದೆಣಿಸಿ, ಅವನ ರಾಜ್ಯವನ್ನು ಕಸಕೊಂಡು, ಅವನಿಗೆ ವರ್ಷಕ್ಕೆ ೬೦೦೦ ರೂ. ಜೀವನಾಂಶವನ್ನು ಗೊತ್ತುಮಾಡಿ ಕೊಟ್ಟರು. ಈ ಜಿಲ್ಲೆಯಲ್ಲಿ ೭ ಹೆಸರಾದ ಗುಡಿಗಳಿರುತ್ತವೆ. ಅವುಗಳಾವವೆಂದರೆ:–ರೂಪನಾಥ, ಘಾಲ್ಝರ, ಜಯಂತೇಶ್ವರ, ಮಹಾಪ್ರಭು, ನಿರ್ಮಾಯಿಶಿವ, ವಾಸುದೇವ. ಈ ಜಿಲ್ಲೆಯಲ್ಲಿ ಜಾತಿಭೇದವು ಇಲ್ಲೆಂದು ತಿಳಿಯುತ್ತದೆ.

ಳು ಹುಟ್ಟಿ, ಒಬ್ಬರ ಹಿಂದೊಬ್ಬರು ತೀರಿಕೊಂಡರು. ಒಂಬತ್ತನೆ ಯವನು ವಿಶ್ವರೂಪನು, ಮತ್ತು ಹತ್ತನೆಯವನೇ ಹೆಸರಾದ ಚೈತನ್ಯನು. ಇವನು ತಾಯಿಯ ಬಸುರಿನಲ್ಲಿ ೧೩ ತಿಂಗಳು ಇದ್ದನಂತೆ.

ಚೈತನ್ಯನ ಮೊದಲಿನ ಹೆಸರು ವಿಶ್ವಂಭರ. ಇವನು ಬಹಳ ಚೆಲುವನಾದ್ದರಿಂದ ಇವನನ್ನು ನೆರೆಹೊರೆಯವರು ಪ್ರೀತಿಸುತ್ತಿದ್ದರು. ಇವನು ಹಟಮಾರಿಯೂ ಕಿಡಿಗೇಡಿಯೂ ಆದ್ದರಿಂದ ನೆರೆ-ಹುಡುಗರನ್ನು ಆಳಿಸುವದೂ, ಎರಡನೆಯವರ ಮನೆಯಿಂದ ತನಗೆ ಬೇಕಾದ ಒಡವೆಗಳನ್ನು, ಹೇಳದೆ ಕೇಳದೆ, ಎತ್ತಿಕೊಂಡು ಬರುವದೂ, ಗಂಗೆಗೆ ಮೈತ್ತೊಳೆದುಕೊಳ್ಳಲಿಕ್ಕೆ ಇಲ್ಲವೆ ಪೂಜೆಮಾಡಲಿಕ್ಕೆ ಬಂದ ಹೆಂಗಸರನ್ನು ಕಾಡುವದೂ ಇವನ ಬಾಲ್ಯದ ಕೆಲಸಗಳಾಗಿದ್ದವು. ಇವನು ಉಳಿದವರಿಗಾರಿಗೂ ಅಂಜದೆ ತನ್ನ ಅಣ್ಣನಾದ ವಿಶ್ವರೂಪನಿಗೆ ಮಾತ್ರ ಹೆದರುತ್ತಿದ್ದನು.

ಚೈತನ್ಯನು ಕೆಲವು ದಿವಸಗಳ ವರೆಗೆ ಸ್ವಭಾಷೆಯನ್ನು ಕಲಿತು, ಬಳಿಕ ಗಂಗಾದಾಸನೆಂಬ ಒಬ್ಬ ಪಂಡಿತನಲ್ಲಿ ಸಂಸ್ಕೃತದ ಅಭ್ಯಾಸ ಮಾಡಲಾರಂಭಿಸಿದನು. ಚಿಕ್ಕಂದಿನಲ್ಲಿ ಭಾಗವತ-ಭಗವದ್ಗೀತೆಗಳು ಅವನ ಪ್ರೀತಿಯ ಗ್ರಂಥಗಳಾಗಿದ್ದವು. ಅವನ ಬುದ್ಧಿಯು ಬಲು ಚುರುಕು ಇತ್ತು. ಅವನು ತುಸು ದಿವಸದಲ್ಲೇ ಬಹಳ ಕಲಿತದ್ದರಿಂದ, ಜಗನ್ನಾಥನ ಮನಸ್ಸಿನಲ್ಲಿ ಕೆಟ್ಟವಿಚಾರಗಳು ಬರತೊಡಗಿದವು. ಏಕೆಂದರೆ ಚೈತನ್ಯನ ಅಣ್ಣನಾದ ವಿಶ್ವರೂಪನು ಸಕ್ಕದವನ್ನು ತೀರಗಲಿತ ಬಳಿಕ ಮನೆಮಾರಿನ ಹಂಬಲವನ್ನು ತೊರೆದು, ಸನ್ಯಾಸಿಯಾದ್ದು ಜಗನ್ನಾಥನ ಮನಸ್ಸಿನಲ್ಲಿ-ಯಾವಾಗಲೂ ಕಟಯುತ್ತಿತ್ತು. ಚೈತನ್ಯನ ಅಭ್ಯಾಸದ ಪರಿಣಾಮವಾದರೂ ಹಾಗೆಯೇ ಆಗಬಹುದೆಂದು ಹೆದರಿ, ಜಗನ್ನಾಥನು ಅವನನ್ನು ಸಾಲೆ ಬಿಡಿಸಿದನು. ಆದರೆ ಮುಂದೆ ಅವನು ಮನೆಯೊಳಗುಳಿದು ಪುಂಡನಾದ್ದರಿಂದ, ಅವನ ತಂದೆಯು ಮತ್ತೆ ಅವನನ್ನು ಸಾಲೆಗೆ ಕಳುಹಲಾರಂಭಿಸಿದನು.

ಚೈತನ್ಯನು ವಾಸುದೇವ-ಸಾರ್ವಭೌಮನೆಂಬ ಪಂಡಿತನ ಹತ್ತರ ಕೆಲವು ದಿವಸ ವಿದ್ಯಕಲಿತ ಬಳಿಕ ಶಾಂತಸ್ವಭಾವದವನಾದನು. ಈಕಾಲಕ್ಕೆ ಶಚಿದೇವಿಗೆ ಸಂಸಾರದಲ್ಲಿ ಸುಖವಿದ್ದಿಲ್ಲ. ಏಕೆಂದರೆ ಮೇಲೆ ಹೇಳಿದಂತೆ ಆಕೆಯ ಮೊದಲಿನ ಎಂಟು ಮಂದಿ ಮಕ್ಕಳು

ಚಿಕ್ಕಂದಿನಲ್ಲೇ ತೀರಿಕೊಂಡುದಲ್ಲದೆ, ೯ನೆಯವನಾದ ವಿಶ್ವರೂಪನು ವಿರಕ್ತನಾಗಿದ್ದನು. ಮತ್ತು ಈಗ ಗಂಡನು ಸತ್ತು ಹೋದ್ದರಿಂದ, ಆಕೆಯು ದುಃಖ-ಸಮುದ್ರದಲ್ಲಿ ಮುಳುಗಿದಳು. ಆದ್ದರಿಂದ ಚೈತನ್ಯನು ಈಕಾಲಕ್ಕೆ ಆಕೆಯನ್ನು ಮೇಲಿಂದ ಮೇಲೆ ಸಂತವಿಸುತ್ತಿದ್ದುದಲ್ಲದೆ, ಆಕೆಯ ಇಚ್ಛೆಯಂತೆ ನಡೆಯುತ್ತಿದ್ದನು. ಆದರೆ ತನ್ನ ಅಣ್ಣನಂತೆ ಇವನೂ ವಿರಕ್ತನಾದಾನೆಂಬ ಅಂಜಿಕೆಯು ಆಕೆಗೆ ಬಹಳದಿವಸದಿಂದಿತ್ತು. ಆದ್ದರಿಂದ ಆಕೆಯು ಆದಷ್ಟು ಬೇಗ ಇವನ ಮದುವೆಯನ್ನು ಮಾಡಿದಳು.

ಮದುವೆಯಾದ ಬಳಿಕ ಚೈತನ್ಯನು ಒಂದು ಸಂಸ್ಕೃತ-ಶಾಲೆಯನ್ನು ಹಾಕಿದನು. ಅವನು ದೊಡ್ಡ ಪಂಡಿತನೆಂದು ಹೆಸರಾದ್ದರಿಂದ ನಾಲ್ಕೂ ಕಡೆಯಿಂದ ಹುಡುಗರು ಅವನ ಸಾಲೆಗೆ ಬರಲಾರಂಭಿಸಿದರು. ಆಕಾಲಕ್ಕೆ ತಾರ್ಕಿಕರಿಗೆ ಬಹುಮಾನವಿದ್ದುದರಿಂದ ಚೈತನ್ಯನಿಗೆ ಅವೃತನಗಳೂ ಉಡುಗರೆಗಳೂ ಬಹಳವಾಗಿ ಬರುತ್ತಿದ್ದವು.

ಚೈತನ್ಯನು ಹುಟ್ಟು-ಸ್ಮಾರ್ತನಿದ್ದುದರಿಂದ ಶ್ರೀವಾಸ, ಉಮಕೊಂಡ ಮುಂತಾದ ವೈಷ್ಣವ-ಪಂಡಿತರು ಅವನಿಗೆ ಹೆದರುತ್ತಿದ್ದರು. ಆದರೆ ಚೈತನ್ಯನು ನಿಷ್ಕಾರಣವಾಗಿ ಅವರಿಗೆ ತೊಂದರೆಕೊಡುತ್ತಿದ್ದಿಲ್ಲ. ದೊಡ್ಡ ಪಂಡಿತನಾದರೂ ಅವನಲ್ಲಿ ಹೆಮ್ಮೆಯು ಎಳ್ಳನಿತಾದರೂ ಇದ್ದಿಲ್ಲ. ಅವನು ಬಹಳ ಉದಾರನಿದ್ದುದರಿಂದ ಅತಿಥಿ-ಅಭ್ಯಾಗತರಿಗೂ ಭಿಕ್ಷುಕರಿಗೂ ದಾರಿಕಾರರಿಗೂ ಆದರ-ಸತ್ಕಾರವನ್ನು ಮಾಡುತ್ತಿದ್ದನು. †

ಇದೇ ಕಾಲಕ್ಕೆ ಚೈತನ್ಯನು ಕೆಲವು ಜನ ಗೆಳೆಯರೊಡನೆ ತನ್ನ ಪೂರ್ವಜರಿದ್ದ ಸಿಲ್ಹೆಟ ಮುಂತಾದ ಬಂಗಾಲದ ಭಾಗಗಳನ್ನು ನೋಡಲಿಕ್ಕೆ ಹೊರಟನು. ಅವನು ಹೋದ ಹೋದಲ್ಲಿ ಜನರು ಅವನಿಗೆ ಬಹುಮಾನ-ಮಾಡಿ, ಅವನು ವಿವರಿಸಿದ ಶಾಸ್ತ್ರದ ತತ್ವಗಳನ್ನು ಭಕ್ತಿ

† ಅವನ ಉದಾರತನದ ಒಂದು ಉದಾಹರಣೆಯುಂಟು. ಒಂದು ದಿನ ಬೇರೊಬ್ಬ ಪಂಡಿತನು ತಾನು ಬರೆದ ನ್ಯಾಯಶಾಸ್ತ್ರದ ಟೀಕೆಗೆ ಆಶ್ರಯಕೊಡಬೇಕೆಂದು ಅವನಿಗೆ ಬೇಡಿಕೊಳ್ಳಲು, ಅವನು ತಾನು ಬರೆದ ಟೀಕೆಯನ್ನು ಹೊಳೆಯಲ್ಲಿ ಚೆಲ್ಲಿಕೊಟ್ಟು, ಆ ಪಂಡಿತನ ಟೀಕೆಯನ್ನು ಮುಂದು ಮಾಡಿದನು! ಇಂತಹ ಪರಾರ್ಥ ಬುದ್ಧಿ ಯಾರ ಮನಸ್ಸನ್ನು ಮೆಚ್ಚಿಸಲಿಕ್ಕಿಲ್ಲ!!

ಯಿಂದ ಆಳಿಸುತ್ತಿದ್ದರು. ಅವನು ತಿರುಗಿ ಊರಿಗೆ ಬರುವಷ್ಟರಲ್ಲಿ ಅವನ ಹೆಂಡತಿಯು ಹಾವುಕಡೆದು ಸ್ವರ್ಗಸ್ಥಳಾಗಿದ್ದಳು. ಈಸುದ್ದಿಯನ್ನು ಕೇಳಿ, ಅವನು ಬಹಳ ಹಳಹಳಿಸಿದನು. ಆದರೂ ಅವನು ಏದೆಗಾರನೂ ತಿಳುವಳಿಕೆಯುಳ್ಳವನೂ ಆದ್ದರಿಂದ, ಅದನ್ನು ಹೆಚ್ಚಾಗಿ ಮನಸ್ಸಿಗೆ ಹಚ್ಚಿಕೊಳ್ಳದೆ, ತಾಯಿಯ ಆಗ್ರಹದಿಂದ ೨ನೆಯ ಮದುವೆಯನ್ನು ಮಾಡಿಕೊಂಡು, ಕೆಲಕಾಲ ಊರಲ್ಲಿದ್ದು ಸಂಸಾರ ಮಾಡಿ, ಬಳಿಕ ಗಯಾಕ್ಕೆ ಹೋದನು. ಅಲ್ಲಿಯ ವಿಷ್ಣು ಮಂದಿರದಲ್ಲಿ ಅವನಿಗೆ ಈಶ್ವರಪುರಿಯೆಂಬ ಒಬ್ಬ ಯೋಗಿಯ ದರ್ಶನವಾಯಿತು. ಆಯೋಗಿಯ ಮಹಾನುಭಾವತ್ವವೂ, ಸದುಪದೇಶವೂ ಅವನ ಮನೋವೃತ್ತಿಯನ್ನು ಬದಲಿಸಿದವು; ಮತ್ತು ಅವನಲ್ಲಿ ವೈರಾಗ್ಯವನ್ನು ಹುಟ್ಟಿಸಿದವು. ಅದ್ದರಿಂದ ಚೈತನ್ಯನು ಅಂದಿನಿಂದ ಸಂಸಾರವನ್ನು ತೊರೆದು, ದೇವರ ಧ್ಯಾನದಲ್ಲಿಯೂ ಜನರಿಗೆ ಮುಕ್ತಿ-ಮಾರ್ಗವನ್ನು ಉಪದೇಶಿಸುವದರಲ್ಲಿಯೂ ತನ್ನ ಉಳಿದ ಆಯುಷ್ಯವನ್ನು ಕಳೆಯ ಬೇಕೆಂದು ನಿಶ್ಚಯಿಸಿ, ಊರಿಗೆ ತಿರುಗಿ ಬಂದು, ತಾಯಿಯ ಅಪ್ಪಣೆಪಡೆದು, ಕೇಶವ-ಭಾರತಿಯೆಂಬವರಿಂದ ಸನ್ಯಾಸಾಶ್ರಮವ ತೆಗೆದುಕೊಂಡು, ಕೆಲವು ದಿವಸ ಅವರ ಬಳಿಯಲ್ಲೇ ನಿಂತು, ಬಳಿಕ ಮಥುರಾ-ಶ್ರೀರಂಗ ಮುಂತಾದ ಸ್ಥಳಗಳನ್ನು ನೋಡಿ, ಜಗನ್ನಾಥಪುರಿಗೆ* ಹೋದನು (೧೫೧೦). ಮುಂದೆ ಅವನು ತನ್ನ ಉಳಿದ ಆಯುಷ್ಯವನ್ನೆಲ್ಲ ಜನರಿಗೆ ಉಪದೇಶ-ಮಾಡುವದರಲ್ಲೇ ಕಳೆದು ೧೫೩೨ ರಲ್ಲಿ ಕಡಲಲ್ಲಿ ಮುಳುಗಿ ಮರಣಹೊಂದಿದನು.

---

* ಜಗನ್ನಾಥಪುರಿಯು ಬಂಗಾಲಿಲಾಖೆಯೊಳಗೆ ಒಡಿಸಾ ಭಾಗದಲ್ಲಿಯೊಂದು ಜಿಲ್ಲೆಯ ಸ್ಥಳವಾಗಿರುತ್ತದೆ. ಇದಕ್ಕೆ ಬರಿ ಪುರಿಯೆಂತಲೂ ಅನ್ನುತ್ತಾರೆ. ಜನಸಂಖ್ಯೆ ಸುಮಾರು ೬೦,೦೦೦. ಇದು ಈಭರತಖಂಡದಲ್ಲಿ ಹೆಸರಾದ ಕ್ಷೇತ್ರವು. ಇದು ಈಗ ಹಿಂದೂ ಜನರ ಕ್ಷೇತ್ರವಿದ್ದಂತೇ ಮೊದಲು ಬೌದ್ಧರ ಕ್ಷೇತ್ರವಾಗಿತ್ತು; ಏಕೆಂದರೆ ಇಲ್ಲೇ ಗೌತಮಬುದ್ಧನ ಚಿನ್ನದ ಹಲ್ಲು ಹುಗಿಯಲ್ಪಟ್ಟಿತ್ತು. ಮುಂದೆ ೭ನೆಯ ಶತಕದಲ್ಲಿ ಹೆಸರಾದ ಭುವನೇಶ್ವರ-ದೇವಸ್ಥಾನವು ಕಟ್ಟಲ್ಪಟ್ಟಿತು. ಈಗ ಇಲ್ಲಿರುವ ಜಗನ್ನಾಥನ ಮೂರ್ತಿಯು ಬಹು ಪ್ರಾಚೀನ-ಕಾಲದ್ದೆಂದು ಹೇಳುತ್ತಾರೆ. ೩೧೮ ರಲ್ಲಿ ರಕ್ತಬಾಹುವೆಂಬೊಬ್ಬ ದುಷ್ಟನು ಪುರಿಯನ್ನು ಮುತ್ತಲು, ಭಕ್ತರು ಜಗನ್ನಾಥನ ಮೂರ್ತಿಯನ್ನು ತೆಗೆದುಕೊಂಡು ಹೋಗಿ ಅಟ್ಟಡವಿಯಲ್ಲಿಟ್ಟರು; ಮುಂದೆ ಒಬ್ಬ ಧಾರ್ಮಿಕನಾದ ಅರಸನು ಅದನ್ನು ತಿರುಗಿ ಊರಿಗೆ

**ಚೈತನ್ಯ-ಪಂಥ**—ಚೈತನ್ಯನು ಎಲ್ಲ ಜಾತಿಯ ಮನುಷ್ಯರು ಉಪದೇಶಕ್ಕೆ ಸರಿಯಾಗಿ ಯೋಗ್ಯರೆಂದು ತಿಳಿದು, **ಗೌತಮ**, **ಶಂಕರಾಚಾರ್ಯ** ಮುಂತಾದವರಂತೆ ಹೊಲೆ-ಹದಿನೆಂಟು ಜಾತಿಯವರಿಗೆ ತನ್ನ ಮತವನ್ನು ಉಪದೇಶಿಸಿದನು. ಅವನು **ಗೌತಮ**ನಂತೆ ಕರ್ಮಮಾರ್ಗವನ್ನು ಹಳಿದು, ಯಜ್ಞ-ಯಾಗ-ಹೋಮ-ಹವನಗಳಿಂದ ಮುಕ್ತಿಯು ದೊರೆಯುತ್ತದೆಂಬ ಮಾತು ಸುಳ್ಳೆಂದು ಬೋಧಿಸಿದನು. ಕರ್ಮ-ಮಾರ್ಗವನ್ನು ಹೀಯಾಳಿಸಿ, ಭಕ್ತಿಮಾರ್ಗವನ್ನು ಹಬ್ಬಿಸಿದ್ದೇ ಅವನು ಮಾಡಿದ ಮಹಾಕಾರ್ಯವು. ಭಕ್ತಿಯು ಮುಕ್ತಿಯ ಮುಖ್ಯಸಾಧನವು; ಸತ್ಕೃತ್ಯದಿಂದಾಗಲಿ ತಪಶ್ಚರ್ಯದಿಂದಾಗಲಿ ಬ್ರಹ್ಮಜ್ಞಾನದಿಂದಾಗಲಿ ಇಂದ್ರಿಯನಿಗ್ರಹದಿಂದಾಗಲಿ, ಗಹನವಿಚಾರದಿಂದಾಗಲಿ, ದಾನದಿಂದಾಗಲಿ, ಸದ್ಗುಣಗಳಿಂದಾಗಲಿ, ಬರುವ ಪುಣ್ಯವು ಭಕ್ತಿಯಿಂದ ಬರುತ್ತದೆಂದು ಚೈತನ್ಯನ ಅಭಿಪ್ರಾಯವಿತ್ತು. ಈ ಭಕ್ತಿಯ ಪ್ರಕಾರಗಳು ೫ ಇರುತ್ತವೆ:—೧ **ಶಾಂತಿ** ಅಥವಾ ದೇವರಧ್ಯಾನ, ೨ **ದಾಸ್ಯ** ಅಥವಾ ದೇವರಸೇವಾ, ೩ ಸಖ್ಯ ಅಥವಾ ಗೆಳೆತನ, ೪ **ವಾತ್ಸಲ್ಯ** ಅಥವಾ ಭಕ್ತಿಪೂರ್ವಕಪ್ರೀತಿ, ೫ **ಮಾಧುರ್ಯ** ಅಥವಾ ಪ್ರೀತ್ಯತಿರೇಕ. ಪ್ರೇಮಪೂರ್ವಕವಾಗಿ ಮನಸ್ಸಿನಿಂದ ದೇವರಲ್ಲಿ ಐಕ್ಯಹೊಂದುವವನೇ ಕೃಷ್ಣನ ನಿಜಭಕ್ತನೆಂದು **ಚೈತನ್ಯ**ನು ಪ್ರತಿಪಾದಿಸಿದನು. ಈಸ್ಥಿತಿಯನ್ನು ಬರಮಾಡಲಿಕ್ಕೆ **ನಾಮಕೀರ್ತನ-ಸಂಕೀರ್ತನ**ಗಳೇ ಮುಖ್ಯಸಾಧನಗಳೆಂದು ಅವನು ನಂಬಿದ್ದನು. **ಚೈತನ್ಯ**ನು ತಾನಿರುವಾಗ ಧರ್ಮೋಪದೇಶಕರು ಗುರುಗಳೆಂದು ತಿಳಿಯಬೇಕೇ ಹೊರತು, ದೇವರೆಂದು ತಿಳಿಯಬಾರದಾಗಿ ಉಪದೇಶಮಾಡಿದ್ದರೂ ಅವನು ಸ್ವರ್ಗಸ್ಥನಾದ ಬಳಿಕ ಅವನ ಮತಾನುಯಾಯಿಗಳು ಅವನು ಕೃಷ್ಣನ ಅವತಾರವೆಂತಲೂ ಅವನ ಶಿಷ್ಯರಾದ **ಅದ್ವೈತ-ನಿತ್ಯಾನಂದ-ಹರಿದಾಸರು** ದೇವತಾಂಶವೆಂತಲೂ ನಂಬಿ, ಅವರೆಲ್ಲರನ್ನು ಈಗಲೂ ಪೂಜಿಸುತ್ತಾರೆ.

---

ಶಂದನು. ಒಡಿಸಾದ ಅರಸನಾದ ಅನಂಗಭೀಮದೇವನೆಂಬವನು ಈಗಿದ್ದ ಜಗನ್ನಾಥನ ಗುಡಿಯನ್ನು ಕಟ್ಟಿಸಿದನು (೧೧೯೮). ಈ ದೇವಸ್ಥಾನಕ್ಕೆ ಸುಮಾರು ೪೦,೦೦೦ ರೂಪಾಯಿ ತರಿಗೆ ಬರುವಷ್ಟು ಭೂಮಿಯು ಉಂಬಳಿಯಾಗಿರುತ್ತದೆ. ಪಂಜಾಬದ ಅರಸನಾದ ರಣಜಿತಸಿಂಗನು ತಾನು ಸಾಯುವಾಗ ಹೆಸರಾದ ಕೋಹಿನೂರೆಂಬ ರತ್ನವನ್ನು ಜಗನ್ನಾಥನಿಗೆ ಕಾಣಿಕೆಯಾಗಿ ಕೊಟ್ಟನು. ಅದು ಈಗ ಜಗನ್ನಾಥನ ಕಿರೀಟದಲ್ಲಿರುವುದರ ಬದಲಾಗಿ ಮಹಾರಾಣಿಯವರ ಕಿರೀಟದಲ್ಲಿರುತ್ತದೆ.



## ೮ ಕಬೀರ (ದೊಡ್ಡವ).

ಈ ಸತ್ಪುರುಷನ ವಂಶದ ಬಗ್ಗೆ ಇನ್ನೂ ನಮಗೆ ಸಾಕಷ್ಟು ತಿಳಿದಿಲ್ಲ.* ಆದರೂ ಇವನ ತಂದೆತಾಯಿಗಳು ಜಾಡರಿದ್ದರೆಂದು ಊಹಿಸಬಹುದು. ಇವನ ತಂದೆಯ ಹೆಸರು ನೂರಿಯು, ತಾಯಿಯ ಹೆಸರು ನೀಮೆಯು. ಕಬೀರಪಂಥದವರು, ಇವನು ಸ್ವಯಂಭುವೆಂತಲೂ ನೂರಿಯೂ, ನೀಮೆಯೂ ಇವನನ್ನು ಸಾಕಿದವರೇ ಹೊರತು ಹಡೆದವರಲ್ಲೆಂತಲೂ ತಿಳಿಯುತ್ತಾರೆ. ಅವರು ಅನ್ನುವದೇನಂದರೆ:—ನೂರಿಯೂ ನೀಮೆಯೂ ಒಂದು ದಿನ ತಮ್ಮ ಗೆಳೆಯನ ಮನೆಗೆ ಹೋಗುವಾಗ, ಕಾಶಿಯ ಹತ್ತರ ಲೋಹೂರ

* ಕೆಲವರು ಕಬೀರನು ಒಬ್ಬ ಬ್ರಾಹ್ಮಣಕುಮಾರಿಯ ಹೊಟ್ಟೆಯಲ್ಲಿ ಹುಟ್ಟಿವನೆಂದು ಹೇಳುತ್ತಾರೆ. ಮೋನಿಯರ ಉಯಿಲ್ಯಮ್ಸನ ಹಿಂದೂಧರ್ಮವನ್ನು ನೋಡಿರಿ.

ಎಂಬ ಕೆರೆಯ ದಂಡೆಯ ಮೇಲೆ ಕಮಲದೆಲೆಯಲ್ಲಿ ಮಲಗಿಸಿದ ಒಂದು ಕೂಸನ್ನು ಕಂಡರು. ನೀಮೆಯು ಆ ಮಗುವನ್ನು ತೆಗೆದುಕೊಂಡು ತನ್ನ ಗಂಡನಿಗೆ ಕೊಟ್ಟಳು. ಕೂಡಲೆ ಆ ಕೂಸು ಅವನಿಗೆ "ಪುಣ್ಯಾತ್ಮನೇ ನನ್ನನ್ನು ಕಾಶಿಗೆ ಒಯ್ದು ಬಿಡು" ಎಂದಿತು. ಹೀಗೆ ಕೂಸು ಮಾತಾಡಿದ್ದನ್ನು ಕೇಳಿ ನೂರಿಯು ಹೆದರಿ, ಅದು ಭೂತಚೇಷ್ಟೆಯೆಂದೆಣಿಸಿ, ಅದನ್ನೂ ತನ್ನ ಹೆಂಡತಿಯನ್ನೂ ಅಲ್ಲೇ ಬಿಟ್ಟು, ಓಡಿ ಹೋದನು. ಅವನು ಒಂದು ಮೈಲು ಹೋಗಿ ತಿರುಗಿ ನೋಡಲು, ಆ ಕೂಸು ಅಲ್ಲೇ ಕಾಣಿಸಿತು. ಆಗ ಅದು ಅವನನ್ನು ಸಂತವಿಸಿ, ತನ್ನನ್ನು ಕಾಪಾಡಬೇಕೆಂದು ಅಂಗಲಾಚಿ ಬೇಡಿಕೊಂಡಿತು. ನೂರಿಯು ಅದರ ದೀನಸ್ವರವನ್ನು ಕೇಳಿ ಧೈರ್ಯಗೊಂಡು ಕನಿಕರಬಟ್ಟು ತನ್ನ ಹೆಂಡತಿಯನ್ನು ಕರೆತಂದು, ಅದನ್ನು ಜೋಪಾನಮಾಡೆಂದು ಅವಳಿಗೆ ಹೇಳಿದನು. ಆದೇ ಕೂಸಿಗೆ ಮುಂದೆ ಕಬೀರನೆಂದು ಹೆಸರಿಟ್ಟರು. †

ಕಬೀರನು ಇದ್ದ ಕಾಲವನ್ನು ನಿಶ್ಚಯವಾಗಿ ಹೇಳಲಾರೆವು. ಕಬೀರಪಂಥದವರು ಇವನು ಶಾಲಿವಾಹನ ಶಕ ೧೨೦೫ ರಿಂದ ೧೫೦೫ರ ವರೆಗೆ ಇದ್ದನೆಂದು ನಂಬುತ್ತಾರೆ. ಆದರೆ ಮನುಷ್ಯರು ೩೦೦ ವರ್ಷಗಳ ವರೆಗೆ ಇರುವದು ಅಸಂಭವವೇ ಸರಿ. ಆದ್ದರಿಂದ ಬೇರೆ ಆಧಾರಗಳಿಂದ ಕಬೀರನ ಕಾಲವನ್ನು ಗೊತ್ತುಮಾಡುವದು ಅವಶ್ಯವಿದೆ. ಶೀಕ ಜನರ ಗುರುವಾದ ನಾನಕನು (ಕ್ರಿ. ಶ. ೧೪೬೮-೧೫೩೮) ತನ್ನ ಗ್ರಂಥದಲ್ಲಿ ಕಬೀರನ ಉಪದೇಶವೆಂದು ಕೆಲವು ಮಾತುಗಳನ್ನು ಬರೆದಿರುತ್ತಾನೆ. ಈ ನಾನಕನು ೧೫ನೆಯ ಶತಕದ ಕಡೆಯ ಭಾಗದಲ್ಲಿ ಇದ್ದನು. ಇದಲ್ಲದೆ ಶಿಕಂದರಲೋಡಿ (ಕ್ರಿ. ಶ. ೧೪೮೮–೧೫೧೭) ಎಂಬ ಸುಲ್ತಾನನು ಆಳುವಾಗ ಕಬೀರನಿದ್ದನೆಂದು ಅಯ

---

† ಭಕ್ತಿವಿಜಯವೆಂಬ ಗ್ರಂಥದಲ್ಲಿ ಕಮಾಲನೆಂಬ ನೆಯ್ಕಾರನಿಗೆ ಗಂಗಾನದಿಯಲ್ಲಿ ಒಂದು ಸಿಂಪಿನೊಳಗೆ ಕಬೀರನು ದೊರೆದನಂತಲೂ ಕಬೀರನಿಗೆ ಮುಂದೆ ಕಮಾಲನೆಂಬ ಮಗನಾದನೆಂತಲೂ ಒಂದು ದಿನ ಕಬೀರನ ಮನೆಗೆ ಕೆಲಸಾಧುಗಳು ಬರಲು, ಅವರಿಗೋಸುಗ ಅನ್ನಸಾಮಗ್ರಿಯನ್ನು ದೊರಕಿಸುವ ಪ್ರಯತ್ನದಲ್ಲಿ ಕಮಾಲನು ಸಾಯಲು ಆ ಸಾಧುಗಳು ಅವನನ್ನು ತಿರುಗಿ ಬದುಕಿಸಿದರೆಂತಲೂ ಬರೆದಿರುತ್ತದೆ.

ನ್ ಅಕಬರಿ ಎಂಬ ಗ್ರಂಥದಲ್ಲಿ ಬರೆದದೆ. ಆದ್ದರಿಂದ ಕಬೀರನು ಕ್ರಿಸ್ತ ಶಕದ ಗಳನೆಯ ಶತಮಾನದ ಕೊನೆಯಲ್ಲಿದ್ದನೆಂದು ಕಂಡು ಬರುತ್ತದೆ.

ಕಬೀರನು ರಾಮಾನಂದನ* ಶಿಷ್ಯನು. ಈಕಡಮೆಯ ಜಾತಿಯವನು ಈಘನಪಂಡಿತನಾದ ಬ್ರಾಬ್ಮಣನ ಶಿಷ್ಯನಾದುದು ಸೋಜಿಗದ ಮಾತೇ ಸರಿ. ಕಬೀರಪಂಥದವರು ಈಸಂಬಂಧದಿಂದ ಹೇಳುವದೇನಂದರೆ:–ಒಂದು ದಿನ ಕಬೀರನು ಭಾಗೀರಥಿಯ ಮಣಿಕರ್ಣಿಕಾ ಘಾಟಿನ ಮೇಲೆ ಮಲಗಿರುವಾಗ, ರಾಮಾನಂದನು ಅದೇ ಘಾಟಿನಿಂದ ಭಾಗೀರಥಿಯ ಸ್ನಾನಕ್ಕೆ ಹೋದನು. ಆಗ ಅಕಸ್ಮಾತ್ತಾಗಿ ರಾಮಾನಂದನ ಕಾಲು ಕಬೀರನ ಮೈಗ್ಗೆ ತಾಕಿತು. ಆಗ ಮಲಗಿರುವವನು ಕಡಮೆಯ ಜಾತಿಯವನೆಂದರಿತು, ರಾಮಾನಂದನು ರಾಮಸ್ಮರಣೆಯನ್ನು ಮಾಡಲಾರಂಭಿಸಿದನು. ಅದನ್ನು ಕೇಳಿ ಕಬೀರನು ತಾನಾದರೂ "ರಾಮ, ರಾಮ" ಎಂದು ಅನ್ನ ಹತ್ತಿದನು. ಮುಂದೆ ಅವರಿಬ್ಬರಿಗೂ ಮನಸ್ಸು ಕೀಳೋ ಜಾತಿ ಕೀಳೋ ಎಂಬ ಬಗ್ಗೆ ತುಸು ವಾದವಾಗಿ, ಕಟ್ಟಕಡೆಗೆ ರಾಮಾನಂದನು ಕಬೀರನ ಪ್ರಾರ್ಥನೆಗೆ ಕಿವಿಗೊಟ್ಟು, ಅವನನ್ನು ತನ್ನ ಶಿಷ್ಯನನ್ನು ಮಾಡಿಕೊಂಡನು.

ರಾಮಾನಂದನು ಜಾತಿಯ ಕಟ್ಟನ್ನು ಮುರಿದು ಹಾಕಿದನೆನ್ನಲಿಕ್ಕೆ ಏನೂ ಅಡ್ಡಿ ಇಲ್ಲ. ತನ್ನ ಮನೆಯನ್ನೂ ಗೆಳೆಯರನ್ನೂ ತನಗೆ ಹತ್ತಿದವರನ್ನೂ ಬಿಟ್ಟು, ಧರ್ಮಾಚರಣೆಯಲ್ಲಿ ತೊಡಗಿದವರಿಗೆ

---

* ರಾಮಾನಂದನು ಗಳನೆಯ ಶತಕದಲ್ಲಿದ್ದಂತೆ ತೋರುತ್ತದೆ. ಇವನು ಕಾಶಿಯಲ್ಲಿ ತನ್ನ ಮುಖ್ಯಮಠವನ್ನು ಸ್ಥಾಪಿಸಿ, ವೈಷ್ಣವ ಮತವನ್ನು ಬೆಳಿಸಿದನು. ಇವನ ಮತದವರು ಸೀತಾರಾಮರನ್ನು ಮುಖ್ಯವಾಗಿ ಪೂಜಿಸುವರು. ಇವನ ೧೨ ಮಂದಿ ಶಿಷ್ಯರಲ್ಲಿ ಕಬೀರ, ರವಿದಾಸ, ಪಿಪ್ಪ ಇವರು ಮುಖ್ಯರು. ಈಮತದ ಮುಖ್ಯಗ್ರಂಥವು ನಾಭಾಜಿಯೆಂಬ ಕವಿಯು ರಚಿಸಿದ ಭಕ್ತಿಮಾಲೆಯು. ಈ ಮತವನ್ನು ಸೂರದಾಸ-ತುಳಸಿದಾಸರೆಂಬ ಕವಿಗಳು ಲೋಕಪ್ರಿಯ ಮಾಡಿದರು.

ಜಾತಿಯೆಲ್ಲಿಯದು? ಎಂದು ಅವನು ತನ್ನ ಶಿಷ್ಯರಿಗೆ ಬೋಧಿಸುತ್ತಿದ್ದನು. ಬೇರೆ ಬೇರೆ ಕುಲದವರು ಇವನ ಶಿಷ್ಯರಾಗಿದ್ದರು.†

ಕಬೀರನು ಬಹಳ ದಯಾಳುವಾಗಿದ್ದನು. ಅವನಲ್ಲಿ ಬಂಧುಪ್ರೀತಿಯು ಹಿರಿದಾಗಿತ್ತು. ಪರರ ದುಃಖವನ್ನು ನೋಡಿ ಅವನ ಹೃದಯವು ಬೇಗನೇ ಕರಗುತ್ತಿತ್ತು. ಒಮ್ಮೆ ಅವನು ಒಂದು ಬೀಸುಕಲ್ಲನ್ನು ನೋಡಿ ಅಂದುದು:—"ಅಕಟಕಟ ಈಯೆರಡೂ ಪಾಳಿಗಳ ನಡುವೆ ಒಂದಾದರೂ ಕಾಳು ಹಿಟ್ಟಾಗದೆ ಉಳಿಯುವದಿಲ್ಲವಲ್ಲ! ಈಕಾಳುಗಳಂತೇ ಪಾಪಿಷ್ಠರ ಗತಿಯಾಗುತ್ತದಲ್ಲ" ಬಳಿಕ ಕೆಲಹೊತ್ತಿನ ಮೇಲೆ ಅವನು ಆಕಲ್ಲನ್ನೆತ್ತಿ ನೋಡಲು, ತಳಗೂಟದ ಹತ್ತಿರಿರುವ ಕೆಲಕಾಳುಗಳು ಒಡೆಯದೆ ಇದ್ದುದು ಅವನ ಕಣ್ಣಿಗೆ ಬಿತ್ತು. ಆಗ ಕಬೀರನು— ಜಗತ್ತು ಈಬೀಸುಕಲ್ಲಿನಂತೆ ಇರುತ್ತದೆ. ದೇವರು ಈ ಜಗತ್ತಿನ ಮಧ್ಯಬಿಂದುವಿನಂತೆ ಇದ್ದುದರಿಂದ ಅವನಲ್ಲಿ ಭಕ್ತಿಯುಳ್ಳವರು ಮಾತ್ರ ಈಕಾಳುಗಳಂತೆ ಸುರಕ್ಷಿತರಾಗಿರುತ್ತಾರೆ. ಉಳಿದವರೆಲ್ಲ ಉಳಿದ ಕಾಳುಗಳಂತೆ ಸಂಸಾರದುಃಖವೆಂಬ ಪಾಳಿಗಳಲ್ಲಿ ಸಿಲುಕಿ ನಾಶಹೊಂದುತ್ತಾರೆ, ಎಂದನು. ಕಬೀರನು ದೇವರಲ್ಲಿ ಬಹಳ ಭಕ್ತಿಯುಳ್ಳವನಿದ್ದನು. ಅವನು ಬೇರೆ ಬೇರೆ ದೊಡ್ಡ ಗೃಹಸ್ಥರ ಕೂಡ ಧರ್ಮಸಂಬಂಧದ ವಾದವಿವಾದ-ಮಾಡಿ, ಅವರನ್ನು ತನ್ನ ಮತಕ್ಕೆ ಒಲಿಸಿಕೊಳ್ಳುವ ಎತ್ತುಗಡೆಮಾಡುತ್ತಿದ್ದನು. ಅವನು ಶಿಕಂದರ ಬಾದಶಹನ ಕೂಡ ಈತರದ ವಾದವನ್ನು ಮಾಡಿದನಂತೆ.

ಕಬೀರನು ಎಂದು ಮಡಿದನೆಂಬದು ನಿಶ್ಚಯವಾಗಿ ತಿಳಿಯುವದಿಲ್ಲ. ಆದರೆ ಗೋರಕಪುರದ ಹತ್ತರ ಮಾಗೂರೆಂಬ † ಹಳ್ಳಿಯಲ್ಲಿ ಅವನ ಹೆಣದ ವ್ಯವಸ್ಥೆಯ ಬಗ್ಗೆ ಬ್ರಾಹ್ಮಣರೂ ಮುಸಲರೂ ವಿವಾದಮಾಡಿದರೆಂದು ತಿಳಿಯುತ್ತದೆ. ಅಲ್ಲಿ ಮುಸಲರ ಮುಖ್ಯಸ್ಥನಾದ ಬಿಜ್ಜಳಖಾನನು ಅದನ್ನು ಹುಗಿಯಬೇಕೆನ್ನುತ್ತಿದ್ದನು. ಆದರೆ ಕಾಶಿಯ ಅರಸನಾದ ವೀರಸಿಂಗನು ಅದನ್ನು ಸುಡಬೇಕೆನ್ನುತ್ತಿದ್ದನು. ಈವಿವಾದ ನಡೆದಾಗ ಕಬೀರನು ಎದ್ದು ನಿಂತು, ತನ್ನ ಹೆಣದ ಮೇಲೆ ಮುಚ್ಚಿರುವ ಅರಿವೆಯನ್ನು ತೆಗೆಯಲಿಕ್ಕೆ ಹೇಳಿ, ಅದೃಶ್ಯನಾದನಂತೆ. ಅರಿವೆಯನ್ನು ತೆಗೆದು ನೋಡಲು, ಅದರ ಕೆಳಗೆ ಹೂ

† ಇವರೊಳಗೆ ಸಮಗಾರನಾದ ರೋಹಿದಾಸನೂ ನಾವಲಿಗನಾದ ಸೇನನೂ ಜಾಡನಾದ ಧೋವಾಯನನೂ ರಜಪೂತನಾದ ಪಿಪ್ಪನೂ ಇದ್ದರು.

ಗಳ ರಾಶಿ ಮಾತ್ರ ಇತ್ತು. ಅದನ್ನು ನೋಡಿ ಎಲ್ಲರೂ ಬೆರಗಾದರು. ಮುಂದೆ ಆಹೂಗಳಲ್ಲಿ ಅರ್ಧ ಹೂಗಳನ್ನು ಮುಸಲ್ಮಾನರು ಮಾಗೂರಲ್ಲಿ† ಹುಗಿದು, ಆದರ ಮೇಲೆ ಒಂದು ಅಂದವಾದ ಗೋರಿಯನ್ನು ಕಟ್ಟಿಸಿದರು. ಉಳಿದ ಅರ್ಧ ಹೂಗಳನ್ನು ಬ್ರಾಹ್ಮಣರು ಕಾಶಿಗೆ ಒಯ್ದು ತಮ್ಮ ಧರ್ಮಪದ್ಧತಿಯಂತೆ ಸುಡಿಸಿ, ಆಯೆಡೆಯಲ್ಲಿ ಒಂದು ವೃಂದಾವನವನ್ನು ಕಟ್ಟಿಸಿದರು. ಈಗಲೂ ಈಸ್ಥಳದಲ್ಲಿ ಪ್ರತಿವರ್ಷ ಜಾತ್ರೆ ಕೂಡುತ್ತದೆ.

ಕಬೀರಪಂಥ—ರಾಮಾನಂದನ ಉಪದೇಶದಿಂದ ಕಬೀರನು ಜ್ಞಾನಿಯಾದನು. ಇವನು ಜಾತಿಭೇದವನ್ನು ತಿರಸ್ಕರಿಸುತ್ತಿದ್ದನು. ತಾಯಿಯ ಹೊಟ್ಟೆಯಲ್ಲಿರುವಾಗ ಒಬ್ಬನೂ ವೇದಗಳನ್ನು ಕಲಿಯುವದಿಲ್ಲ; ಹುಟ್ಟಿದ ಕೂಡಲೆ ಆವನೂ ಹಿಂದು ಅಥವಾ ಮುಸಲ್ಮಾನನಾಗುವದಿಲ್ಲ. ಮುಂದೆ ತಂತಮ್ಮ ವಿಚಾರಗಳಂತೆಯೂ ಉದ್ಯೋಗಗಳಂತೆಯೂ ಜನರು ಬೇರೆ ಬೇರೆ ಮತಗಳನ್ನು ಕಯ್ಕೊಳ್ಳಬಹುದು. ಮನುಷ್ಯರೊಳಗೆ ಭೇದವನ್ನು ಹುಟ್ಟಿಸುವಂತಹ ಜ್ಞಾನವು ನಿಜವಾದ ಜ್ಞಾನವೇ ಅಲ್ಲ. ದೇವರು ಒಬ್ಬನಿರುತ್ತಾನೆ. ಅವನು ಶುದ್ಧಾತ್ಮನೂ ದೋಷರಹಿತನೂ ಇರುವುದಲ್ಲದೆ ತನಗೆ ಬೇಕಾದಾ ಬೇಕಾದ ರೂಪವನ್ನು ಹೊಂದುವನು. ಜೀವಾತ್ಮ-ಪರಮಾತ್ಮರಲ್ಲಿ ನಿಜವಾದ ಭೇದವಿಲ್ಲ.* ದೇವರು ಮನುಷ್ಯನಿಗೆ ಜೀವವನ್ನು ಕೊಟ್ಟಿರುತ್ತಾನೆ. ಅದ್ದರಿಂದ ಅದನ್ನು ತೆಗೆದುಕೊಳ್ಳುವದೂ ಎರಡನೆಯವರಿಗೆ ತೊಂದರೆಕೊಡುವದೂ ಪಾಪಕೃತ್ಯಗಳೇ ಸರಿ. ಮನುಷ್ಯನು ಆವಾಗಲೂ ಸತ್ಯವನ್ನು ಪ್ರೀತಿಸಬೇಕು, ಮತ್ತು ಅಸತ್ಯವನ್ನು ಜರೆಯಬೇಕು. ಏಕೆಂದರೆ ದೇವರು ಸತ್ಯಸ್ವರೂಪಿಯಾಗಿರುತ್ತಾನೆ. ಬೇರೆ ಬೇರೆ ಧರ್ಮಕೃತ್ಯಗಳೂ ಬಾಹ್ಯಸಂಸ್ಕಾ

---

† ಮಾಗೂರು ಬಂಗಾಲ ಇಲಾಖೆಯೊಳಗೆ ಜಸ್ಸೋರ ಜಿಲ್ಲೆಯಲ್ಲಿಯೊಂದು ತಾಲೂಕಿನ ಸ್ಥಳವಿರುತ್ತದೆ. ಇಲ್ಲಿ ಹುಟ್ಟುವ ಸಕ್ಕರೆಯು ಪರಸ್ಥಳಕ್ಕೆ ರಫ್ತಾಗುತ್ತದೆ. ಈವೂರಲ್ಲಿ ಸಾಸಿವೆಯೆಣ್ಣೆಯನ್ನು ತೆಗೆಯುತ್ತಾರೆ.

* ಕಬೀರನು ಮುಸಲ್ಮಾನನಿದ್ದು ಈಪ್ರಕಾರ ಅದ್ವೈತಮತವನ್ನು ಸ್ವೀಕರಿಸಿದ್ದು ಸೋಜಿಗವೆಂದು ತೋರಬಹುದು. ಆದರೆ ಮುಸಲ್ಮಾನರೊಳಗಿನ ಸುಫಿಮತದವರು ಕೇವಲಾದ್ವೈತಿಗಳಿರುತ್ತಾರೆ.

ರಗಳೂ ಮೂರ್ತಿಪೂಜೆಯೂ ದೇವರಿಗೆ ಸೇರುವದಿಲ್ಲ. ಸುಮ್ಮನೆ ಜಪಮಾಲೆಯನ್ನು ತಿರುಗಿಸುತ್ತ ಕುಳಿತರೆ, ಮನಸ್ಸು ಶುದ್ಧವಾಗುವದಿಲ್ಲ; ಪುಣ್ಯವೂ ಬರುವದಿಲ್ಲ. ಆದ್ದರಿಂದ ಜಪಮಾಲೆಯನ್ನು ತಿರುವುದರಲ್ಲಿ ಹೊತ್ತುಗಳೆಯದೆ, ಪ್ರತಿಯೊಬ್ಬ ಮನುಷ್ಯನು ತನ್ನ ಹೃದಯವೆಂಬ ಜಪಮಾಲೆಯ ಮಣಿಗಳನ್ನು ತಿರುಗಿಸಿ, ಶುದ್ಧಾಂತಃಕರಣವುಳ್ಳವನಾಗಬೇಕು; ಕೆಟ್ಟವಿಚಾರಗಳನ್ನು ಮನಸ್ಸಿನಲ್ಲಿ ತರಕೂಡದು. ನೂರಾರು ಯಾತ್ರೆಗಳನ್ನು ಮಾಡಿದರೂ ಅಂತಃಕರಣವು ಶುದ್ಧವಿಲ್ಲದಿದ್ದರೆ ಪುಣ್ಯವು ಬಾರದು. ಸಾವಿರಾರು ಪುಸ್ತಕಗಳನ್ನು ಓದಿದರೂ ದೇವರಲ್ಲಿ ಭಕ್ತಿಯಿಲ್ಲದಿದ್ದರೆ ಅವ್ರೋದಿನಿಂದ ಏನೂ ಉಪಯೋಗವಾಗಲಿಕ್ಕಿಲ್ಲ. ಉಪಾಸನೆಯು ಸತ್ಯಕ್ಕೆ ಸರಿಯಾಗಲಾರದು. ಅಸತ್ಯಕ್ಕಿಂತ ಹೆಚ್ಚಿನ ದೋಷವಿಲ್ಲ, ಮತ್ತು ಸತ್ಯಕ್ಕಿಂತ ಹೆಚ್ಚಿನ ಪುಣ್ಯವಿಲ್ಲ. ಸತ್ಯವುಳ್ಳ ಹೃದಯದಲ್ಲೇ ದೇವರು ಮನೆಮಾಡಿಕೊಂಡಿರುತ್ತಾನೆ. ಬಹಳ ಮಾತಾಡುವವನು ಅಸತ್ಯಕ್ಕೊಳಗಾಗಬಹುದು. ಆದ್ದರಿಂದ ನಾಲಿಗೆಯನ್ನು ಬಿಗಿಹಿಡಿ, ಬುದ್ಧಿವಂತರೊಡನೆ ಗೆಳೆತನಮಾಡು, ಉತ್ತಮ-ಗುರುವನ್ನು ಹುಡುಕಿ ಅವನ ಉಪದೇಶಗಳ ದಿಟತ್ವವನ್ನು ಮನಗಂಡು, ಅವ್ರುಪದೇಶಗಳಂತೆ ನಡೆ. ಭೂತದಯಾ, ಸತ್ಯ, ಏಕಾಂತವಾಸ, ಧರ್ಮಗುರುವಿಗೆ ವಿಧೇಯತ್ವ ಇವೇ ಮುಖ್ಯ-ಸದ್ಗುಣಗಳು. ಈಯೆಲ್ಲ ಕಬೀರನ ಉಪದೇಶಗಳು ಬ್ರಿಜ್ಞಕವೆಂಬ ಗ್ರಂಥದಲ್ಲಿ ಬರೆದಿರುತ್ತವೆ.



# ವಲ್ಲಭಾಚಾರ್ಯರು.

ವಲ್ಲಭಾಚಾರ್ಯನು* ಲಕ್ಷ್ಮಣ ಭಟ್ಟನೆಂಬೊಬ್ಬ ತೆಲಗು ಬ್ರಾ

---

* ಗುಜರಾಥ ದೇಶದಲ್ಲಿ ಮಹಾರಾಜಧರ್ಮವೆಂಬ ವೈಷ್ಣವ ಮತವು ಹಬ್ಬಿರುತ್ತದಷ್ಟೇ. ಇದಕ್ಕೆ ವಲ್ಲಭ-ಮತವೆಂತಲೂ ಅನ್ನುವರು. ಈಮತದ ಮೂಲಾರಂಭವು ಹೇಗೆಂದರೆ:—

ಮೊಟ್ಟಮೊದಲು ವಿಷ್ಣುಸ್ವಾಮಿ ಎಂಬವನೊಬ್ಬ ಘನವಿದ್ವಾಂಸನು ವಿಷ್ಣುವೇ ಸರ್ವೋತ್ತಮನೆಂದು ಪ್ರತಿಪಾದಿಸಿ, ತನ್ನ ಮತದ ತತ್ವಗಳನ್ನು ಜನರಿಗೆ ಬೋಧಿಸಿದನು. ಇವನು ಋಗ್ವೇದಕ್ಕೆ ಭಾಷ್ಯವನ್ನು ಬರೆದನೆಂದು ಹೇಳುತ್ತಾರೆ. ಇವನ ತರುವಾಯ ಜ್ಞಾನದೇವ, ಕೇಶವಾಚಾರ್ಯ, ಹಿರಾಲಾಲ ಎಂಬ ಮೂವರು ಇವನ ಅನುಯಾಯಿಗಳಾಗಿ, ಇವನ ತತ್ವಗಳನ್ನೇ ಉಪದೇಶಿಸಿದರು. ಹಿರಾಲಾಲನ ೬ ಮಂದಿ ಮಕ್ಕಳಲ್ಲಿ ಶ್ರೀಧರನೆಂಬವನು ಹೆಸರುವಾಸಿಯಾದನು. ಶ್ರೀಧರನ ತರುವಾಯ ಬಲ್ಲವ ಮಾಧವನು ಅವನ ತರುವಾಯ ವಲ್ಲಭಾಚಾರ್ಯನು ಈಮತವನ್ನು ಬೆಳಿಸಲಿಕ್ಕೆ ಯತ್ನಿಸಿದರು.

ಹ್ಮಣನ ಮರ್ಜಿಲ ಮಗನು. ಈಲಕ್ಷ್ಮಣ ಭಟ್ಟನು ಕನಿಕರವೆಂಬ ಹಳ್ಳಿಯಲ್ಲಿ ಇರುತ್ತಿದ್ದನೆಂತಲೂ ಇವನ ತಂದೆಯ ಹೆಸರು ನಾರಾ ಯಣ ಭಟ್ಟನೆಂತಲೂ ತಿಳಿಯುತ್ತದೆ. ನಾರಾಯಣ ಭಟ್ಟನು ಶಾಲಿ ವಾಹನ ಶಕದ ೧೬ನೆಯ ಶತಕದ ಆರಂಭದ ಸುಮಾರಿನಲ್ಲಿ ಇದ್ದ ನೆಂಬ ಬಗ್ಗೆ ಕೆಲವು ಆಧಾರಗಳಿವೆ. ಈಲಕ್ಷ್ಮಣ ಭಟ್ಟನ ಕನಸಿನಲ್ಲಿ ಕೃಷ್ಣನು ಬಂದು, ನಾನು ನಿನ್ನ ಎರಡನೆಯ ಮಗನಾಗಿ ಹುಟ್ಟುವೆ ನೆಂದು ಹೇಳಿದನಂತೆ. ಈಸಂಗತಿಯನ್ನು ಅವನು ಜನರೊಳಗೆ ಪ್ರಸಿ ದ್ಧಮಾಡಿದನು. ಅವನ ಹೆಂಡತಿಯ ಹೆಸರು ಎಲ್ಲಮ್ಮಾಗಾರಳು. ಅವನ ಹಿರಿಯ ಮಗನ ಹೆಸರು ರಾಮಕೃಷ್ಣನು.

ಲಕ್ಷ್ಮಣ ಭಟ್ಟನು ತನ್ನ ಹಿರಿಯ ಮಗನನ್ನೂ ಹೆಂಡತಿಯನ್ನೂ ಕರೆಕೊಂಡು ಕಾಶಿಗೆ ಹೋಗಿ, ಅಲ್ಲಿ ಇರುತ್ತಿರಲಾಗಿ, ಮುಸಲ್ಮಾ ನರಿಗೂ ಸನ್ಯಾಸಿಗಳಿಗೂ ದೊಡ್ಡ ಜಗಳವಾಯಿತು. ಅದರಲ್ಲಿ ತನ್ನ ಹೆಂಡರು-ಮಕ್ಕಳಿಗೆ ಅಪಾಯವಾಗ ಬಹುದೆಂಬ ಹೆದರಿಕೆಯಿಂದ ಅವನು ಅವರೊಡನೆ ಅಲ್ಲಿಂದ ಹೊರಟು, ಚಂಪಾರಣ್ಯವನ್ನು ಸೇರಿ ದನು. ಆಗಲವನ ಹೆಂಡತಿಯು ಏಳು ತಿಂಗಳು ಬಸುರಿದ್ದಳು. ಆಕೆಯು ಮುಸಲ್ಮಾನರಿಗೂ ಸುತ್ತಲಿನ ಭಯಂಕರವಾದ ಕಾಡಿಗೂ ಹೆದರಿ, ಎಂಟನೆಯ ತಿಂಗಳಲ್ಲಿ ಆಕಾಡಿನಲ್ಲೇ ಗಂಡುಮಗನನ್ನು ಹಡೆದಳು. ಈಮಗನೇ ಮುಂದೆ ಹೆಸರಾದ ವಲ್ಲಭಾಚಾರ್ಯನು; ಇವನು ವಿಕ್ರಮ ಶಕದ ೧೫೩೫ನೆಯ ವರುಷದ (ಅಂದರೆ ಕ್ರಿ. ಶ. ೧೪೭೯ರ) ವೈಶಾಖ ಬಹುಳ ನವಮಿ ರವಿವಾರ ದಿವಸ ಹುಟ್ಟಿದನು.

ವಲ್ಲಭಾಚಾರ್ಯನು ಹುಟ್ಟಿದಾಗ ಅವನ ವಾಸಕ್ಕೋಸ್ಕರವಾಗಿ ಚಂಪಾರಣ್ಯದಲ್ಲಿ ಚಿನ್ನದ್ದೊಂದು ಭವ್ಯವಾದ ಮಂದಿರವು ಪ್ರಕಟ ವಾಯಿತೆಂತಲೂ ದೇವತೆಗಳು ವಿಮಾನದಲ್ಲಿ ಕುಳಿತು ಪುಷ್ಪವೃಷ್ಟಿ ಯನ್ನು ಮಾಡಿದರೆಂತಲೂ ಅಪ್ಸರರು ನೃತ್ಯವನ್ನೂ ಗಂಧರ್ವರು ಗಾಯನವನ್ನೂ ಮಾಡಿದರೆಂತಲೂ ನಿಜವಾರ್ತೆಯೆಂಬ ಗ್ರಂಥದಲ್ಲಿ ಬರೆದದೆ. ಅದು ಹೇಗೇ ಇರಲಿ; ಪ್ರಸೂತಿಯಾದನಂತರ ವಲ್ಲಭನ ತಂದೆ-ತಾಯಿಗಳು ಮುಸಲ್ಮಾನರ ಹೆದರಿಕೆಯಿಂದ ಆಕೂಸನ್ನು ಒಂದು ಆಲದ ಮರದ ಕೆಳಗೆ ಅದರ ಎಲೆಗಳನ್ನು ಹಾಸಿ ಹೊಚ್ಚಿ ಮಲಗಿಸಿ, ಅಲ್ಲಿಂದ ಓಡಿ ಹೋದರು. ಬಳಿಕ ಅವರು ಚೌದಾನ ಗರದಲ್ಲಿ ಕೆಲವು ದಿವಸ ಇದ್ದು, ಕಾಶಿಯಲ್ಲಿ ಶಾಂತಿಯುಂಟಾದ

ಸುದ್ದಿಯು ಕೇಳಿ, ಮರಳಿ ತಾವು ಬಂದ ದಾರಿಯಿಂದಲೇ ವಾರಣಾಸಿಗೆ ಹೊರಟರು. ತಿರುಗಿ ಬರುವಾಗ ಚಂಪಾರಣ್ಯದಲ್ಲಿ ತಾವು ಬಿಟ್ಟು ಹೋದ ಸ್ಥಳದಲ್ಲೇ ತಮ್ಮ ಕೂಸು ಯಜ್ಞ-ಕುಂಡದ ಹತ್ತರ ಸುರಕ್ಷಿತವಾಗಿ ಆಡುತ್ತಿರುವುದನ್ನು ನೋಡಿ, ಅವರಿಗೆ ಬಹು-ಸಂತೋಷವಾಯಿತು, ಮತ್ತು ತಮ್ಮ ಮಗನು ಕೃಷ್ಣನ ಅವತಾರವೆಂಬ ನಂಬಿಗೆಯು ಅವರಲ್ಲಿ ಹೆಚ್ಚು ಬಲಗೊಂಡಿತು. ಆಲದ ಮರದ ಬುಡದಲ್ಲಿ ಸಂರಕ್ಷಣೆ ಹೊಂದಿದ ಕಾರಣ, ಅವರು ಆ ಕೂಸಿಗೆ ವಟತ್ರಾತ ಎಂಬ ಹೆಸರನ್ನಿಟ್ಟು, ಅವನನ್ನು ತೆಗೆದುಕೊಂಡು ಕಾಶಿಗೆ ಹೋದರು. ಮುಂದೆ ವಟತ್ರಾತ ಎಂಬ ಶಬ್ದವು ಅಪಭ್ರಂಶಹೊಂದಿ ವಲ್ಲಭನೆಂದಾಯಿತು. *

ಆರೇಳು ವರುಷದವನಾದ ಬಳಿಕ ವಲ್ಲಭನು ಮಥುರೆಯ ನೆರೆಯಲ್ಲಿದ್ದ ಗೋಕುಲವೆಂಬ† ಊರಲ್ಲಿ ನಾರಾಯಣ ಭಟ್ಟನೆಂಬ ಬ್ರಾಹ್ಮಣನ ಹತ್ತರ ಓದು-ಕಲಿಯಲಾರಂಭಿಸಿದನು. ಅವನು ೪ ತಿಂಗಳಲ್ಲಿ ನಾಲ್ಕು ವೇದ, ಆರುಶಾಸ್ತ್ರ, ಹದಿನೆಂಟು ಪುರಾಣ ಮುಂತಾದವುಗಳನ್ನು ತೀರಗಲಿತನೆಂದು ಬ್ರಿಜ್ಜ ಭಾಷೆಯಲ್ಲಿದ್ದ ಅವನ ಚರಿತ್ರದಲ್ಲಿ ಬರೆದಿರುತ್ತದೆ. ವಲ್ಲಭನು ೧೧ ವರ್ಷದವನಿದ್ದಾಗ ಅವನ ತಂದೆಯು ತೀರಿದನು. ಮರುವರುಷ ಅವನು ತಾಯಿಯ ಅಪ್ಪಣೆಯನ್ನು ಪಡೆದು, ತನ್ನ ಊರನ್ನು ಬಿಟ್ಟು ಪ್ರವಾಸಕ್ಕೆ ಹೊರಟನು (೧೪೮೯).

ಪ್ರವಾಸ-ಮಾಡುತ್ತಾ ಮಾಡುತ್ತಾ ವಲ್ಲಭನು ದಕ್ಷಿಣದೇಶದಲ್ಲಿ ಒಂದು ಪಟ್ಟಣಕ್ಕೆ ಬಂದನು. ಅಲ್ಲಿ ದಾಮೋದರ ದಾಸನೆಂಬ ಒಬ್ಬ ಸಾವುಕಾರನಿರುತ್ತಿದ್ದನು. ವಲ್ಲಭನು ತನ್ನ ಉಪದೇಶ-ಸಾಮರ್ಥ್ಯದಿಂದ ಆ-ದಾಮೋದರದಾಸನನ್ನು ತನ್ನ ಶಿಷ್ಯನನ್ನು ಮಾಡಿಕೊಂಡನು. ಮುಂದೆ ಅವರಿಬ್ಬರೂ ಕೂಡಿ ವಿಜಯನಗರಕ್ಕೆ

---

* ವಲ್ಲಭಾಚಾರ್ಯನು ಹುಟ್ಟಿದ ಸ್ಥಳದಲ್ಲಿ ಅವನ ಶಿಷ್ಯರು ಒಂದು ದೊಡ್ಡ ಗುಡಿಯನ್ನು ಕಟ್ಟಿಸಿರುತ್ತಾರೆ.

† ಗೋಕುಲವು ವಾಯುವ್ಯ-ಪ್ರಾಂತದೊಳಗೆ ಮಥುರಾಜಿಲ್ಲೆಯಲ್ಲಿ ಮಥುರೆಯ ನೈರುತ್ಯಕ್ಕೆ ೬ ಮೈಲಿನ ಮೇಲೆ ಯಮುನೆಯ ದಂಡೆಯಲ್ಲಿ ಒಂದು ಪಟ್ಟಣವದೆ.

ಹೋದರು. ಅಲ್ಲಿ ವಲ್ಲಭನ ಅಜ್ಜನ ಮನೆಯಿತ್ತು. ಆಕಾಲಕ್ಕೆ ವಿಜಯನಗರದಲ್ಲಿ ಕೃಷ್ಣದೇವರಾಜನು ಆಳುತ್ತಿದ್ದನು. ಈಯರಸನ ಸಭೆಯಲ್ಲಿ ವಲ್ಲಭನಿಗೂ ಶೈವರಿಗೂ ವಾದವಾಯಿತು. ಅರಸನು ವಲ್ಲಭನ ವಿದ್ಯಕ್ಕೆ ಮೆಚ್ಚಿ ಅವನಿಗೆ ಬಹಳ ಹಣಕೊಟ್ಟು ಸನ್ಮಾನಮಾಡಿದನು. ಬಳಿಕ ವಲ್ಲಭನು ಆಹಣದ ಕೆಲಭಾಗದಿಂದ ಅಲ್ಲಿರುವದೊಂದು ಮೂರ್ತಿಗೆ ಚಿನ್ನದ ಉಡುದಾರವನ್ನು ಮಾಡಿಸಿಕೊಟ್ಟು, ಉಳಿದ ಹಣದಿಂದ ತನ್ನ ತಂದೆಯ ಸಾಲವನ್ನು ತೀರಿಸಿದನು.

ವಿಜಯನಗರದ ರಾಜಸಭೆಯಲ್ಲಿ ಆದ ವಾದದಿಂದ ವಲ್ಲಭನು ಘನಪಂಡಿತನೆಂದು ಹೆಸರಾದನು. ವೈಷ್ಣವರು ಇವನಿಗೆ ಆಚಾರ್ಯನೆಂಬ ಬಹುಮಾನದ ಬಿರುದನ್ನು ಕೊಟ್ಟರು. ಮುಂದೆ ಇವನು **ಉಜ್ಜಯಿನಿಗೆ** ಹೋಗಿ, ಸಿಪ್ರಾ ಹೊಳೆಯ ದಂಡೆಯ ಮೇಲೊಂದು ಆಲದ ಮರದ ಬುಡದಲ್ಲಿ ತನ್ನ ಪೀಠವನ್ನು ಸ್ಥಾಪಿಸಿದನು.* ಬಳಿಕ ಇವನು ಪ್ರಯಾಗವನ್ನು ನೋಡಿ, ಅಲ್ಲಿಂದ ಕಾಶಿಗೆ ಹೋದನು. ಅಲ್ಲಿ ಕೆಲವು ದಿವಸನಿಂತು, ಅಲ್ಲಿಂದ ಬದರಿಕೇಶ್ವರನ ದರ್ಶನಕ್ಕೆ ಹೋದನೆಂದು ತಿಳಿಯುತ್ತದೆ.

ವಲ್ಲಭಾಚಾರ್ಯನು ೯ ವರುಷ ದೇಶಸಂಚಾರ-ಮಾಡಿದನೆಂತಲೂ ಎರಡು ಸಾರೆ ಭರತಖಂಡಕ್ಕೆ ಪ್ರದಕ್ಷಿಣೆಯ ಹಾಕಿದನೆಂತಲೂ, ಒಟ್ಟಿಗೆ ೧೨೦೦೦ ಮೈಲು ಹಾದಿನಡೆದನೆಂತಲೂ ಲೇಖವದೆ. ಅವನು ವೃಂದಾವನಕ್ಕೆ ತಿರುಗಿ ಬಂದ ಬಳಿಕ ಕೃಷ್ಣನು ಅವನ ಶ್ರಮೆಕ್ಕೆ ಮೆಚ್ಚಿ ಪ್ರತ್ಯಕ್ಷನಾಗಿ ಬಾಲ-ಗೋಪಾಲನ ಪೂಜೆಯನ್ನು ಹಬ್ಬುಗೊಳಿಸಲಿಕ್ಕೆ ಅಪ್ಪಣೆಕೊಟ್ಟನಂತೆ. ಮುಂದೆ ಅವನು ರುದ್ರಸಾಂಪ್ರದಾಯವೆಂಬ ಹೆಸರಿನಿಂದ ತನ್ನ ಮತವನ್ನು ಪಡುವಣ ಹಿಂದುಸ್ಥಾನದಲ್ಲಿ ಬೆಳಿಸಿ ಸ್ವರ್ಗಸ್ಥನಾದನು.

ವಲ್ಲಭ ಪಂಥಕ್ಕೆ ಪುಷ್ಟಿಮಾರ್ಗವೆಂದೆನ್ನುತ್ತಾರೆ. ವಲ್ಲಭನು ಕಾಶಿಯಲ್ಲಿರುವಾಗ ೧೭ ಗ್ರಂಥಗಳನ್ನು ಬರೆದನು. ಇವುಗಳೊಳಗೆ ಭಾಗವತದ ಟೀಕೆಯೇ ಮುಖ್ಯವಾದ್ದು. ಅದರಲ್ಲೇ ವಲ್ಲಭಪಂಥ

* ಇದಲ್ಲದೆ ಮುತ್ರಾ ಎಂಬ ಹೊಳೆಯ ಘಾಟಿನ ಮೇಲೆ ಒಂದು ಪೀಠವೂ ಚುನಾರ ಕೋಟೆಯಿಂದ ೨ ಮೈಲಿನ ಮೇಲೆ ಒಂದು ಪೀಠವೂ ಆಚಾರ್ಯರ ಬಾವಿಯೆಂಬ ಒಂದು ಬಾವಿಯೂ ಇರುತ್ತವೆ.

ದವರ ಮುಖ್ಯಾರಾಧನಾ-ದೇವತೆಯಾದ ಗೋಪಾಲಕಷ್ಣನ ಬಾಲ ಲೀಲೆಗಳ ವರ್ಣನೆಯುಂಟು. ವಲ್ಲಭಪಂಥದವರೊಳಗೆ ವಿವೇಕಿಗಳಾದವರು ಭಾಗವತದಲ್ಲಿ ವರ್ಣಿಸಿದ ಕೃಷ್ಣ-ಗೋಪಿಯರ ಸಂಬಂಧದ ವರ್ಣನೆಯು ಜೀವಪರಮಾತ್ಮರ ಸಂಬಂಧವನ್ನು ಲಾಕ್ಷಣಿಕ ರೀತಿಯಿಂದ ತೋರಿಸುತ್ತದೆಂದು ನಂಬುತ್ತಾರೆ. ವಲ್ಲಭನ ತರುವಾಯ ಅವನ ಎರಡನೆಯ ಮಗನಾದ ವಿಠ್ಠಲನಾಥ ಗೋಸಾವಿಯು ಧರ್ಮಪಟ್ಟವನ್ನೇರಿದನು, ಮತ್ತು ಅವನ ಆಳು ಮಂದಿ ಶಿಷ್ಯರು ಬೇರೆ ಬೇರೆ ದಿಕ್ಕುಗಳಿಗೆ ಹೋಗಿ, ವಲ್ಲಭಮತವನ್ನುಪದೇಶಿಸಿದರು. ವಿಠ್ಠಲನಾಥ ಗೋಸಾವಿಯ ತರುವಾಯ ಅವನ ಏಳು ಮಂದಿ ಮಕ್ಕಳು ಮಹಾರಾಜರೆಂಬ ಬಿರುದನ್ನು ಧರಿಸಿ, ಏಳು ಬೇರೆ ಬೇರೆ ಮಠಗಳನ್ನು ಮಾಡಿಕೊಂಡು ಸ್ವತಂತ್ರರಾದರು. ಈ ಮಠಗಳಲ್ಲಿ ಮುಂಬಯಿ-ಕಚ್ಛ-ಕಾಠೇವಾಡ-ಮಾಳವೆಗಳಲ್ಲಿರುವ ಮಠಗಳೇ ಹೆಸರಾಗಿರುತ್ತವೆ.

ವಲ್ಲಭಮತ— ವೇದಾಂತದಲ್ಲಿ ವಲ್ಲಭನ ಮತವು ರಾಮಾನುಜಾಚಾರ್ಯರ ಮತವನ್ನು ಬಹುಶಃ ಹೋಲುತ್ತಿದ್ದರೂ ವಲ್ಲಭನ ಒಲವು ಅದ್ವೈತದ ಕಡೆಗೆ ಹೆಚ್ಚಾಗಿತ್ತು. ವಲ್ಲಭಾಚಾರ್ಯನಿಗಿಂತ ಮೊದಲು ಆಗಿ ಹೋದ ಮತೋಪದೇಶಕರು ದೇಹದಂಡನೆಯಿಂದ ಮಾತ್ರ ದೇವರು ಒಲಿಯುತ್ತಾನೆಂದು ಬೋಧಿಸಿ, ಸಂಸಾರ ಸುಖಕ್ಕೆ ಮೆಚ್ಚದೆ, ಸುಖೋಪಭೋಗದ ಒಡವೆಗಳನ್ನು ನಿರಾಕರಿಸಿ, ಪರಕುರಗಟಿಯನ್ನು ಹೊದ್ದುಕೊಂಡು, ಕರ್ಮಮಾರ್ಗದಿಂದಾಗಲಿ ಜ್ಞಾನಮಾರ್ಗದಿಂದಾಗಲಿ ಭಕ್ತಿಮಾರ್ಗದಿಂದಾಗಲಿ ಮುಕ್ತಿಯನ್ನೈಯ್ದಬೇಕೆಂದು ಬೋಧಿಸುತ್ತಿದ್ದರು. ಆದರೆ ವಲ್ಲಭ-ಮತವು ಇದರಿಂದ ತೀರ ಭಿನ್ನವಾಗಿತ್ತು. ವಲ್ಲಭನು ಡೋರರು ಮಾದಿಗರು ನಾದಿಗರು ನೆಯ್ಕಾರರು ಮುಂತಾದ ಬಡಬಗ್ಗರಿಗೆ ತನ್ನ ಮತವನ್ನು ಉಪದೇಶಮಾಡಲಿಕ್ಕೆ ಹವಣಿಸದೆ, ಸಿರಿವಂತರಿಗೆ ಉಪದೇಶಮಾಡಿದನು. ಅವನು ದೇವರು ಸರ್ವಾಂತರ್ಯಾಮಿ ಆದುದರಿಂದ ಅಟ್ಟಡವಿ-ಗವಿಗಳಲ್ಲಿದ್ದಷ್ಟೇ ದೊಡ್ಡಪಟ್ಟಣಗಳಲ್ಲಿಯೂ ಭವ್ಯವಾದ ಮಂದಿರಗಳಲ್ಲಿಯೂ ಇರುತ್ತಾನೆಂತಲೂ ಸನ್ಯಾಸಾಶ್ರಮ-ಕಯ್ಕೊಂಡು ದೇಹದಂಡನೆಯಿಂದೊಡಗೂಡಿದ ಆರಾಧನೆಯಿಂದ ದೇವರು ಮೆಚ್ಚಿದಷ್ಟೇ ಗೃಹಸ್ಥಾಶ್ರಮದಲ್ಲಿದ್ದು ವಿಷಯೋಪಭೋಗವನ್ನು ತೆಗೆದುಕೊಳ್ಳುತ್ತಾ ಮಾಡಿದ ಪೂಜೆಗೆ ಮೆಚ್ಚುತ್ತಾ

ನೆಂತಲೂ ಪ್ರತಿಪಾದಿಸಿ, ಅಂದವಾದ ಮಠವನ್ನು ಕಟ್ಟಿಸಿ, ರತ್ನಖಚಿತವಾದ ಚಿನ್ನದ ಮಂಟಪದಲ್ಲಿ ಅನರ್ಘ್ಯವಾದ ಬಾಲಗೋಪಾಲನ ಪ್ರತಿಮೆಯನ್ನಿರಿಸಿ, ಸುವಾಸಿಕ-ತೈಲ-ಕರ್ಪುರ-ಗಂಧ-ಮಾಲ್ಯಾದಿಗಳಿಂದಲೂ ನೃತ್ಯಗಾಯನಗಳಿಂದಲೂ ಆಮೂರ್ತಿಯನ್ನು ಅಷ್ಟವಿಧವಾಗಿ ಅರ್ಚಿಸಿ, ಮಿಷ್ಟಾನ್ನ-ನೈವೇದ್ಯವನ್ನು ಮಾಡಿ, ರತ್ನಖಚಿತವಾದ ಮಂಚದ ಮೇಲೆ ಹಾಸಿದ ಮೆತ್ತನ್ನ ಕುತ್ತನಿಯ ಗಾದೆಯ ಮೇಲೆ ಮಲಗಿಸಿ, ಕಾಲುಗಳನ್ನೊತ್ತಿ ಮಲಗಿಸುವ ಪೂಜಾವಿಧಾನವನ್ನು ಪ್ರಚಾರದಲ್ಲಿ ತಂದನು; ಮತ್ತು ಮುಂದೆ ವಲ್ಲಭನ ಶಿಷ್ಯರು ಬಾಲಗೋಪಾಲನ ಮೂರ್ತಿಯನ್ನು ಸೇವಿಸಿದಂತೆ ಅವರನ್ನು ಅವರ ಶಿಷ್ಯರು ಸೇವಿಸಲಾರಂಭಿಸಿದರು. ಪ್ರೇಮಸಾಗರವೆಂಬ ಪುಸ್ತಕವು ಈಮತದವರ ಮುಖ್ಯಗ್ರಂಥವು. ಇಂತಹ ಸುಖೋಪಭೋಗಕ್ಕನುಕೂಲವಾದ ದೇವತೋಪಾಸನವನ್ನು ಮಾಡಲಿಕ್ಕೆ ಯಾವ ಧನವಂತನು ಬೇಸರಗೊಳ್ಳುವನು? ಇಂತಹ ವಿಷಯಲಂಪಟ-ಮತದಲ್ಲಿ ಇಂದ್ರಿಯನಿಗ್ರಹದ ಅಗತ್ಯವೆಲ್ಲಿ? *

---

* ವಲ್ಲಭಾಚಾರ್ಯನ ಮುಂದಿನವರ ಅವಿವೇಕದಿಂದ ಈಮತದಲ್ಲಿ ಎಷ್ಟೋ ದುರಾಚಾರಗಳು ಸೇರಿದ್ದನ್ನು ನೋಡಿ ಒಳ್ಳೆಯ ಮನುಷ್ಯರಿಗೆ ದುಃಖವಾಗದೆ ಇರಲಾರದು. ಈಮತಸ್ಥರು ತಾವು ಇಂಬುಗೊಟ್ಟ ದುರಾಚಾರಗಳನ್ನು ಚೆನ್ನಾಗಿ ವಿಚಾರಿಸಿ, ಅವುಗಳನ್ನು ದೂರ ಮಾಡುವದು ಆವಶ್ಯವಿದೆ. ೧೮೬೨ ರಲ್ಲಿ ಮುಂಬಯಿ ಹಾಯಿಕೋರ್ಟಿನಲ್ಲಿ ಒಬ್ಬ ಮಹಾರಾಜನ ಸಂಬಂಧದಿಂದ ನಡೆದ ನ್ಯಾಯದಲ್ಲಿ ವಲ್ಲಭಮತದವರೊಳಗೆ ಸೇರಿದ ಎಷ್ಟೋ ದೋಷಗಳು ಬಯಲಿಗೆ ಬಂದವು. ಈಮತದ ಹೆಂಗಸರು ಗೋಪಾಲನನ್ನು ಪೂಜಿಸುವದರ ಬದಲಾಗಿ ಮಹಾರಾಜರನ್ನೇ ಪೂಜಿಸುವದಲ್ಲದೆ, ಅವರನ್ನು ತೂಗುಮಣಿಯ ಮೇಲೆ ಕುಳ್ಳಿರಿಸಿ ತೂಗುವದೂ, ಅವರು ತಿಂದ ವೀಳೆಯನ್ನೂ ಎಂಜಲವನ್ನೂ ತಿನ್ನುವದೂ, ಅವರ ಚರಣತೀರ್ಥವನ್ನು ತೆಗೆದುಕೊಳ್ಳುವದೂ ತನುಮನೋಧನದಿಂದ ಅವರ ಎಲ್ಲ ಇಚ್ಛೆಗಳನ್ನು ಪೂರ್ಣಮಾಡುವದೂ ತಮ್ಮ ಮುಖ್ಯಕರ್ತವ್ಯಗಳೆಂದು ನಂಬಿದ್ದರು. ಸ್ವಾಮಿನಾರಾಯಣನೆಂಬ ಸನ್ಯಾಸಿಯು ಸುಮಾರು ನಾಲ್ಕಿಪ್ಪತ್ತು ವರ್ಷಗಳ ಹಿಂದೆ ಈದೋಷಗಳನ್ನು ದೂರ ಮಾಡುವ ಉದ್ದೇಶದಿಂದ ಪ್ರಯತ್ನಮಾಡಿ ವರ್ತಾಲ (ವೃತಾಲಯ)-ಅಹ

# ೧೦ ಗುರು ನಾನಕಶಹಾ.

ಶೀಕರು ಪಂಜಾಬ ಇಲಾಖೆಯಲ್ಲಿ ಹಬ್ಬಿರುತ್ತಾರೆಂತಲೂ ಈನಮ್ಮ ಭರತಖಂಡದ ಅರ್ವಾಚೀನ ಇತಿಹಾಸದಲ್ಲಿ ಹೆಸರಾಗಿರುತ್ತಾರೆಂತಲೂ ಈಗಲಾದರೂ ಕಲಿಗಳೆಂದು ಹೊಗಳಿಸಿಕೊಳ್ಳುತ್ತಾರೆಂತಲೂ ಎಲ್ಲ ವಾಚಕರಿಗೂ ಗೊತ್ತಿರಬಹುದು. ಇಲ್ಲಿ, ಶೀಕರ ಮತವನ್ನಾರು ಸ್ಥಾಪಿಸಿದರು? ಇದು ಹೇಗೆ ಬೆಳೆಯಿತು? ಈಮತದ ಮುಖ್ಯ-ತತ್ವಗಳಾವವು? ಈಮತಕ್ಕೂ ಶೀಕ ಜನರ ಶೌರ್ಯಕ್ಕೂ ಏನು ಸಂಬಂಧವಿದೆ? ಮುಂತಾದ ಪ್ರಶ್ನೆಗಳ ಉತ್ತರವನ್ನು ತುಸುದರಲ್ಲಿ ಕೊಡಲಿಕ್ಕೆತ್ತುಗಡೆ-ಮಾಡುವೆವು.

ಈಶೀಕ-ಮತವನ್ನು ಸ್ಥಾಪಿಸಿದವನು **ಗುರು ನಾನಕಶಹನು.** ಇವನು ಲಾಹೋರದ ಪಡುವಣಿಗೆ ೩೦ ಮೈಲುಗಳ ಮೇಲಿದ್ದ ತಾಲ್ಬಂದವೆಂಬ ಹಳ್ಳಿಯಲ್ಲಿ ಹುಟ್ಟಿದನು (೧೪೬೮). ಇವನ ತಾಯಿಯ ಹೆಸರು ತ್ರಿಪತೆಯು; ಇವನ ತಂದೆಯು **ಕಾಳು** ಎಂಬ ಹೆಸರಿನ ಒಬ್ಬ ಕ್ಷತ್ರಿಯ ಕುಲದ ಕಾರಕೂನನಾಗಿದ್ದನು. **ನಾನಕ**ನ ಬಾಲ್ಯದ ಸಂಬಂಧದಿಂದ ನಮಗೇನೂ ಹೆಚ್ಚಿಗೆ ಗೊತ್ತಾಗುವದಿಲ್ಲ. ಆದರೆ ಅವನು ಚಿಕ್ಕಂದಿನಲ್ಲೇ ವಿಚಾರ-ಮುದ್ರೆಯವನಂತೆ ತೋರುತ್ತಿದ್ದನೆಂತಲೂ ಬೈರಾಗಿಗಳ ಮೇಲೆ ವಿಶ್ವಾಸವಿಡುತ್ತಿದ್ದನೆಂತಲೂ ದಂತಕಥೆಗಳುಂಟು.

ನಾವಕನು ೫ ವರ್ಷದವನಾದ ಬಳಿಕ ಅವನ ತಂದೆಯು ಅವನನ್ನು ಉರ್ದುಸಾಲೆಗೆ ಹಾಕಿದನು. ತರುವಾಯ **ನಾನಕನು** ಸಂಸ್ಕೃತ-ಪಾರಸಿಕ-ಭಾಷೆಗಳನ್ನು ಬಲುಚುರುಕುತನದಿಂದ ಕಲಿತನು,

---

ವ್ಮೆದಾಬಾದಗಳಲ್ಲಿ ಹೊಸ ಮಠಗಳನ್ನು ಸ್ಥಾಪಿಸಿದನು. ಅವನ ಶಿಷ್ಯರು ಈಗ ಬಹಳ ಜನರಾಗಿದ್ದಾರೆ. ಸ್ವಾಮಿನಾರಾಯಣನು ತನ್ನ ಮತದವರ ಆಚರಣೆಯ ಸಂಬಂಧದಿಂದ ೨೧೨ ನೇಮಗಳನ್ನು ಮಾಡಿದ್ದಾನೆ. ಅಸತ್ಯ ಹಿಂಸಾ ವ್ಯಭಿಚಾರ ಮದ್ಯಮಾಂಸ ವಿಶ್ವಾಸಘಾತಕತನ ಮುಂತಾದವುಗಳನ್ನಾರೂ ಮಾಡಬಾರದೆಂಬದೆ ಈನೇಮಗಳುಳ್ಳ ಶಿಕ್ಷಾಪತ್ರವೆಂಬ ಗ್ರಂಥದ ಮುಖ್ಯೋದ್ದೇಶವು. ಈಮತದವರು ಬ್ರಹ್ಮವಿಷ್ಣು ಮಹೇಶ್ವರರಲ್ಲಿ ಭೇದವನ್ನು ಕಲ್ಪಿಸುವದಿಲ್ಲ.

ಮತ್ತು ಚಿಕ್ಕಂದಿನಲ್ಲೇ ಚೆಲೊ ಕವಿತೆಗಳನ್ನು ಮಾಡಲಾರಂಭಿಸಿದನು. ನಾನಕನು ೯ ವರ್ಷದವನಾದ ಬಳಿಕ ಕಾಳು ಅವನ ಮುಂಜಿಯ ಸಿದ್ಧತೆಯನ್ನು ಮಾಡಿದನು. ಮುಂಜಿಯ ಮುಹೂರ್ತ ಬರಲು ನಾನಕನು ಜನಿವಾರನ್ನು ಹಾಕಿಕೊಳ್ಳಲಿಕ್ಕೆ ಒಡಂಬಡದೆ ಅಂದುದೇನಂದರೆ:—ಈಜನಿವಾರದಿಂದ ಏನೂ ಉಪಯೋಗವಿದ್ದಂತೆ ತೋರುವದಿಲ್ಲ. ಏಕೆಂದರೆ ಇದನ್ನು ಹಾಕಿಕೊಂಡ ಎಷ್ಟೋ ಜನರು ಚೆಂಡಾಲರಂತೆ ನಡೆಯುತ್ತಾರೆ. ದ್ವಿಜರು ಹಾಕಲಿಕ್ಕೆ ಯೋಗ್ಯವಾದ ಜನಿವಾರವು ದಯೆಯೆಂಬ ಅರಳೆಯಿಂದ ಮಾಡಲ್ಪಟ್ಟಿರಬೇಕು; ಸಮಾಧಾನವೆಂಬ ಗುಣವೇ ಅದರ ಎಳೆಯಾಗಿರಬೇಕು; ಇಂದ್ರಿಯಗಳ ನಿಗ್ರಹವೇ ಅದರ ಬ್ರಹ್ಮಗಂಟಾಗಿರಬೇಕು; ಮತ್ತು ಸತ್ಯವೆಂಬ ಗುಣವೇ ಇಂತಹ ಜನಿವಾರದ ಒಂಟೆಯಾಗಿರಬೇಕು. ಈತರದ ಜನಿವಾರವಿದ್ದರೆ ಅದನ್ನು ನಾನು ಸಂತೋಷದಿಂದ ಹಾಕಿಕೊಳ್ಳುವೆನು; ಇಲ್ಲವಾದರೆ ನನಗೆ ಜನಿವಾರವೇ ಬೇಡ.” ಕಟ್ಟಕಡೆಗೆ ಅವನ ತಂದೆತಾಯಿಗಳೂ ಆಪ್ತಿಷ್ಟರೂ ಪರಿಪರಿಯಿಂದ ಹೇಳಿ,ಅವನನ್ನು ಜನಿವಾರ-ಹಾಕಿಕೊಳ್ಳಲಿಕ್ಕೊಡಂಬಡಿಸಿದರು.

ಮುಂಜಿಯಾದ ಬಳಿಕ ನಾನಕನು ಸಾಧು-ಸಂತರ ಜತೆಯಲ್ಲಿ ಕಾಲಕಳೆಯಲಾರಂಭಿಸಿದನು. ಇದು ಸ್ವಾಭಾವಿಕವಾಗಿ ಕಾಳುವಿಗೆ ಸೇರಲಿಲ್ಲ. ಆದ್ದರಿಂದ ಅವನು ಒಂದು ದಿವಸ ತನ್ನ ಮಗನನ್ನು ಕರೆದು ಅವನಿಗೆ ಹೇಳಿದ್ದೇನಂದರೆ:—ಬಾಳಾ, ನಾನಕಾ, ಈಗ ನೀನು ದೊಡ್ಡವನಾದ್ದರಿಂದ ಸಂಸಾರದ ಕೆಲಸದಲ್ಲಿ ನನಗೆ ನೆರವಾಗುವುದು ಯೋಗ್ಯವೇ ಸರಿ. ನನ್ನ ಕುರಿಗಳನ್ನು ಈಗ ಆಳುಮಕ್ಕಳು ಕಾಯುತ್ತಾರೆ. ಆದರೆ ಅವರಿಂದ ಅವುಗಳ ಜೋಪಾನವು ನೆಟ್ಟಗಾಗುವದಿಲ್ಲ. ಆದ್ದರಿಂದ ಇನ್ನು ಮುಂದೆ ನೀನು ಸುಮ್ಮನೆ ಕಾಲಕಳೆಯಧೆ ಅವುಗಳನ್ನು ಕಾಯ್ದರೆ, ಕುರಿಗಳ ಆರಯಿಕೆಯು ಚೆನ್ನಾಗಿ ಆಗುವುದಲ್ಲದೆ ಆಳಿನ ಸಂಬಳವು ಉಳಿಯುವದು. ತಂದೆಯ ಈಮಾತನ್ನು ಕೇಳಿ, ನಾನಕನು ಕುರಿಗಳನ್ನು ಕಾಯಲಿಕ್ಕೆ ಒಡಂಬಟ್ಟನು. ಅವನು ದಿನಾಲು ಕುರಿಗಳನ್ನು ಅಡವಿಗೊಯ್ದು, ಸಂಜೆಯ ವರೆಗೆ ವಿಚಾರ ಮಾಡುತ್ತಾ ಒಂದು ಗಿಡದ ಬುಡಕ್ಕೆ ಕುಳಿತು, ಹೊತ್ತು ಮುಳುಗುವಾಗ ಆಕುರಿಗಳನ್ನು ಮನೆಗೆ ಹೊಡೆದುಕೊಂಡು ಬರುತ್ತಿದ್ದನು. ಇದನ್ನು ನೋಡಿ, ಕಾಳುವಿಗೆ ಸಂತೋ

ಷವಾಯಿತು. ಅವನು ತನ್ನ ಮಗನ ಹುಚ್ಚು ಹೋಯಿತೆಂದು ಹಿಗ್ಗಿದನು. ಆದರೆ ಈಸಂತೋಷವು ಬಹು ದಿವಸ ಉಳಿಯಲಿಲ್ಲ ಏಕೆಂದರೆ ನಾನಕನು ದಿನದಂತೆ ವಿಚಾರ ಮಾಡುತ್ತಾ ಕುಳಿತಿರುವಾಗ ಒಂದುದಿನ ಅವನ ಕುರಿಗಳು ನೆರೆಯ ಹೊಲವನ್ನು ಹೊಕ್ಕು ಬೆಳೆಯನ್ನು ನಾಶಮಾಡಿದವು. ಆಹೊಲದ ಒಡೆಯನು ಕಾಳುವಿಗೆ ಈಯೆಲ್ಲ ಸಂಗತಿಗಳನ್ನು ತಿಳಿಸಲು, ಅವನು ನೊಂದುಕೊಂಡು ಆಗೃಹಸ್ಥನಿಗೆ ಆದ ಹಾನಿಯನ್ನು ತುಂಬಿಕೊಟ್ಟನು. ಹೀಗೇ ಮೇಲಿಂದ ಮೇಲೆ ನೆರೆಹೊಲದವರು ದೂರ ಹೇಳಲಾರಂಭಿಸಿದ್ದರಿಂದ, ಕಾಳು ಬೇಸತ್ತು ನಾನಕನಿಂದ ಕುರಿಕಾಯುವುದನ್ನು ಬಿಡಿಸಿ, ಮತ್ತೆ ಅದಕ್ಕೋಸುಗ ಮೊದಲಿನಂತೆ ಒಂದು ಆಳನ್ನು ಇಟ್ಟುಕೊಂಡು, ನಾನಕನಿಗೆ ಹೊಲಕ್ಕೆ ಹೋಗಿ ಆಳುಗಳ ಸಂಗಡ ಕೆಲಸಮಾಡಲಿಕ್ಕೆ ಹೇಳಿದನು. ನಾನಕನು ಅದಕ್ಕೊಡಂಬಡದೆ ತನ್ನ ತಂದೆಗೆ ಹೇಳಿದ್ದೇನಂದರೆ:—ಅಪ್ಪಾ, ನನ್ನಿಂದ ಈಕೆಲಸವು ಆಗಲಾರದು. ಏಕೆಂದರೆ ಈಗ ನಾನು ಜೀವವೆಂಬ ಹೊಲವನ್ನು ಸದ್ವಿಚಾರವೆಂಬ ರೆಂಟೆಯಿಂದ ಹಸನ ಮಾಡಿ, ದೇವರ ನಾಮೋಚ್ಚಾರವೆಂಬ ಬೀಜವನ್ನು ಬಿತ್ತಲಾರಂಭಿಸಿದ್ದೇನೆ; ಅದ್ದರಿಂದ ನನಗೆ ಎರಡನೆಯಾವ ಕೆಲಸವನ್ನೂ ಕಯ್ಕೊಳ್ಳಲಿಕ್ಕೆ ಹೊತ್ತಿಲ್ಲ. ಈಮಾತನ್ನು ಕೇಳಿ, ಕಾಳುವಿಗೆ ಬಹುದುಃಖವಾಯಿತು. ನಾನಕನು ದೇವತಾ-ಧ್ಯಾನದಲ್ಲಿ ತಲ್ಲೀನನಾದ್ದರಿಂದ ಹೀಗೆ ತನಗೆ ಉತ್ತರ ಕೊಟ್ಟನೆಂದು ಅವನಿಗೆ ಹೊಳೆಯಲಿಲ್ಲ. ಆದ್ದರಿಂದ ಅವನು ತನ್ನ ಮಗನಿಗೆ ಏನೋ•ರೋಗವಾಗಿರುತ್ತದೆಂದೆಣಿಸಿ, ಒಬ್ಬ ವೈದ್ಯನನ್ನು ಕರೆತಂದನು. ಆದರೆ ಆವೈದ್ಯನು ಮಾಡುವದೇನು? ನಾಡಿನಲ್ಲಿ ಹಬ್ಬಿದ ದುಃಖಕ್ಕೆ ಔಷಧವೇನಾದರು ನಿನ್ನಲ್ಲಿದ್ದರೆ ಹೇಳೆಂದು ನಾನಕನು ಅವನಿಗೆ ಕೇಳಲು, ಅವನು ನಿರುತ್ತರನಾಗಿ ಸುಮ್ಮನೇ ಮನೆಯ ಹಾದಿಹಿಡಿದನು.

ಹೀಗೇ ಗುದುಮುರುಗೆಯಲ್ಲಿ ಕೆಲಕಾಲ ಹೋದ ಬಳಿಕ, ಕಾಳು ನಾನಕನನ್ನು ವ್ಯಾಪಾರ-ಮಾಡಲಿಕ್ಕೊಡಂಬಡಿಸಿ, ಕೆಲವು ಹಣವನ್ನೂ ಬಾಳು ಎಂಬ ಒಬ್ಬ ಆಳನ್ನೂ ಕೊಟ್ಟು, ಅವನನ್ನು ಪರವೂರಿಗೆ ಕಳುಹಿದನು. ಆದರೆ ನಾನಕನು ಹಾದಿಯಲ್ಲಿ ಸಿಕ್ಕ ಕೆಲವು ವೈರಾಗಿಗಳಿಗೆ ತನ್ನಲ್ಲಿದ್ದ ಹಣವನ್ನೆಲ್ಲ ಕೊಟ್ಟು 'ಉಧೋ ಲಕ್ಷ್ಮಣ' ವೆಂದು ಮನೆಗೆ ತಿರುಗಿ ಬಂದನು. ಆಗ ಕಾಳುವಿನ ಸಿಟ್ಟು ಹೊಟ್ಟೆ

ಯಲ್ಲಿ ಹಿಡಿಸದಂತಾಯಿತು. ಆದ್ದರಿಂದ ಅವನು ನಾನಕನನ್ನು ಒಳಿತಾಗಿ ತಿಳಿಸಿದನು. ಆದರೆ ಇಂತಹ ಸಿಟ್ಟಿನ ಕೃತ್ಯದಿಂದ ಆಗುವದೇನು? ನಾನಕನ ಮೆಯ್ಯು ಮಾತ್ರ ನುಗ್ಗಾಯಿತೆ ಹೊರತು ಬೇರೆ ಏನೂ ಫಲವಾಗಲಿಲ್ಲ. ಮುಂದೆ ಕೆಲದಿವಸಗಳ ಮೇಲೆ ನಾನಕನು ತನ್ನ ಬೆರಳಲ್ಲಿದ್ದ ಉಂಗುರವನ್ನೂ ಒಂದು ತಂಬಿಗೆಯನ್ನೂ ಒಬ್ಬ ಸನ್ಯಾಸಿಗೆ ಕೊಟ್ಟು ಬಂದುದರಿಂದ ಕಾಳುವು ಸಿಟ್ಟಿಗೆದ್ದು ಅವನನ್ನು ತನ್ನ ಮನೆಯಿಂದ ಹೊರಗೆ ಹಾಕಿದನು.

ಬಳಿಕ ನಾನಕನು ಮಾಡಬೇಕೇನು? 'ಹೊಟ್ಟೆ ಮಾಡಿತು ಮೂರಾಬಟ್ಟೆ' ಎಂಬ ಗಾದೆಯಂತೆ ಅವನಿಗೆ ಕೂಳಿನ ಬಾಧೆಯು ತಟ್ಟಿತು. ಆದ್ದರಿಂದ ಅವನು ನಿರುಪಾಯನಾಗಿ ಸುಲ್ತಾನ ಪುರದಲ್ಲಿದ್ದ ತನ್ನ ಕ್ಕನ ಮನೆಗೆ ಹೋದನು. ಅಲ್ಲಿ ಚೆನ್ನಾಗಿ ಆತಿಥ್ಯವಾದರೂ, ಬಹು ದಿವಸ ತನ್ನ ಭಾವನಿಗೆ ಭಾರವಾಗಿರುವದು ಅವನಿಗೆ ಸರಿಯೆಂದು ತೋರಲಿಲ್ಲ. ಆದ್ದರಿಂದ ಅವನು ತನ್ನ ಭಾವನಾದ ಜಯರಾಮನ ಸಹಾಯದಿಂದ ಸುಲ್ತಾನ ಪುರದ ನವಾಬನ ಅಂಗಡಿಯಲ್ಲಿ ಕಾರಕೂನನಾಗಿ, ತನ್ನ ಕೆಲಸವನ್ನು ಎಚ್ಚರದಿಂದ ಮಾಡಲಾರಂಭಿಸಿದನು.*

ನಾನಕನು ಈಮೇರೆಗೆ ಉದ್ಯೋಗಿಯಾದ್ದನ್ನು ಕಂಡು, ಎಲ್ಲ ಆಪ್ತೇಷ್ಟರಿ[illegible]ರಮಾನಂದವಾಯಿತು. ಆದ್ದರಿಂದ ಅವರು ಅವನ ಮದುವೆಮಾ[illegible]ಕೆಂದೆಣಿಸಿ, ಪೋಕ್ಷಕರಂದರವೆಂಬ ಹಳ್ಳಿಯಲ್ಲಿದ್ದ ಶಿರೋಲ[illegible]ಖನೆಯೆಂಬ ಕ್ಷತ್ರಿಯ ಕುಲದ ವಧುವನ್ನು ಗೊತ್ತು ಮಾಡಿ, ಮದುವೆಯನ್ನು ಸಮಾರಂಭದಿಂದ ಮಾಡಿದರು. ಈಮದುವೆಯ ವೆಚ್ಚಕ್ಕಾಗಿ ಸುಲ್ತಾನಪುರದ ನವಾಬನು ೩೦೦೦ ರೂಪಾಯಿಗಳನ್ನು ನಾನಕನಿಗೆ ಉಚಿತವಾಗಿ ಕೊಟ್ಟನು (೧೪೮೭).

ಮದುವೆಯಾದ ತರುವಾಯ ನಾನಕನು ಬೇರೆ ಮನೆಮಾಡಿಕೊಂಡು ಇರಲಾರಂಭಿಸಿದನು. ಅವನು ಭಕ್ತಿವಂತನೆಂದು ಹೆಸರಾದ್ದರಿಂದ ಪಾರಮಾರ್ಥಿಕ-ಮಾರ್ಗವನ್ನು ಅವಲಂಬಿಸುವ ಇಚ್ಛೆ

* ಹೀಗೆ ಕೆಲವು ದಿವಸ ಹೋದ ಬಳಿಕ ಕೆಲವರು ಆಗದವರು ನಾನಕನು ಅಂಗಡಿಯನ್ನು ಹಾಳುಮಾಡುತ್ತಾನೆಂದು ನವಾಬನಿಗೆ ತಿಳಿಸಿದರು. ಆದ್ದರಿಂದ ನವಾಬನು ತಾನೇ ಬಂದು ಅಂಗಡಿಯ ಲೆಕ್ಕ-ಸಾಮಾನುಗಳನ್ನು ಪರೀಕ್ಷಿಸಿ, ಏನೂ ತಗಲು ಇಲ್ಲದ್ದನ್ನು ಮನಗಂಡು, ನಾನಕನಿಗೆ ಬಹುಮಾನಮಾಡಿದನು.

ಯುಳ್ಳ ಜನರು ಅವನ ಕಡೆಗೆ ಬಂದು, ಅವನ ಉಪದೇಶವನ್ನು ಕೇಳುತ್ತಿದ್ದರು. ಈಜನರೊಳಗೆ ಭಗೀರಥನೆಂಬವನು ಅವನ ಶಿಷ್ಯ ನಾದನು.* ಮುಂದೆ ಕೆಲದಿವಸಗಳ ಮೇಲೆ ಅವನಿಗೆ ಒಬ್ಬ ಸನ್ಯಾಸಿಯ ದರ್ಶನವಾಯಿತು. ಆಸನ್ಯಾಸಿಯು ನಾನಕನ ಭಕ್ತಿಪರತ್ವ ವನ್ನು ನೋಡಿ, ದೇವತಾ-ಸೇವೆಯಲ್ಲಿ ಕಾಲಕಳೆಯಲಿಕ್ಕೆ ಅವ ನಿಗೆ ಉಪದೇಶಮಾಡಿದನು. ಈಯುಪದೇಶವು ನಾನಕನ ಮನ ಸ್ಸಿನಲ್ಲಿ ನಟ್ಟದರಿಂದ ಅವನು ತನ್ನ ಅಂಗಡಿಯ ಕೆಲಸದಲ್ಲಿ ದುರ್ಲಕ್ಷ-ಮಾಡಿದ್ದಲ್ಲದೆ, ಹೆಚ್ಚು ಹೊತ್ತನ್ನು ದೇವರ ಧ್ಯಾನದಲ್ಲಿ ಕಳೆಯ ಲಾರಂಭಿಸಿದನು. ಅವನು ದಿನಾಲು ಬೆಳಿಗ್ಗೆ ಎದ್ದು ಹೊಳೆಗೆ ಹೋಗಿ ಜಳಕ ತೀರಿಸಿಕೊಂಡು ದೇವರ ಧ್ಯಾನಮಾಡಿ, ಕೆಲಹೊತ್ತು ಅಂಗಡಿಯಲ್ಲಿ ಕುಳಿತು, ಮತ್ತೆ ಸಾಯಂಕಾಲಕ್ಕೆ ಹೊಳೆಗೆ ಹೋಗುತ್ತಿದ್ದನು. ಹೀಗಿರುತ್ತಾ ಒಂದು ದಿನ ಅವನು ಹೊಳೆಗೆ ಹೋಗಿ ತಿರುಗಿ ಮನೆಗೆ ಬರಲೇ ಇಲ್ಲ; ಆಪ್ತೇಷ್ಟರು ನಾಲ್ಕೂಕಡೆಗೆ ಹುಡುಕಿ ಹುಡುಕಿ ಬೇಸತ್ತರು. ಎಲ್ಲಿಯೂ ಅವನು ಸಿಗಲಿಲ್ಲ. ಆಗ ಕುತ್ಸಿತ ಮನಸ್ಸಿನವರು ಅವನು ಅಂಗಡಿಯ ಹಣಕದ್ದೊಯ್ದನೆಂದು ಅನ್ನಲಾರಂಭಿಸಿದರು. ಆದರೆ ನಾನಕನು ಮುಂದೆ ಮೂರನೆಯ ದಿವಸ ತಿರುಗಿ ಬಂದು ಅಂಗಡಿಯಲ್ಲಿದ್ದ ಕೆಲ ಸಾಮಾನುಗಳನ್ನು ಜನರಿಗೆ ದಾನ ಮಾಡಿಬಿಟ್ಟನು. ಬಳಿಕ ಅವನು ಜನರಿಗೆ ನೀತಿಯನ್ನು ಉಪದೇಶಮಾಡಲಾರಂಭಿಸಿದನು. ಆಕಾಲದ ಹಿಂದೂ ಜನರೂ ಮುಸಲ್ಮಾನರೂ ತೋರಿಕೆಗೆ ಮಾತ್ರ ಧರ್ಮಾಚರಣೆಯನ್ನು ಮಾಡುತ್ತಾರೆಂದು ಅವನು ನೆರೆನಂಬಿದ್ದನು. ಆದ್ದರಿಂದ ಅವನು ಅವರಿಗೆ ಉಪದೇಶ-ಮಾಡಿದ್ದೇನೆಂದರೆ :—

"ಸರಿಯಾದ ಮುಸಲ್ಮಾನನೆಂದರೆಯಾರು? ಇಂತಹನಲ್ಲಿ ಹೆಮ್ಮೆ ಸೊಕ್ಕುಗಳಿರಬಾರದು; ಅವನು ದಯಾಪರನಾಗಿರಬೇಕು. ಅವನಿಗೆ ಭಕ್ತಿಯೇ ಮಸೀದೆಯು, ಸತ್ಯವೇ ದೇವತಾಸ್ತುತಿಯು, ನ್ಯಾಯಬುದ್ಧಿಯೇ ಅನ್ನವು, ನಾಚಿಕೆಯೇ ಸುಂತಿಯು, ಇಂದ್ರಿಯ ನಿಗ್ರಹವೇ ರೋಜೆಯು, ಒಳ್ಳೆಲಸಗಳೇ ಕಾಬಾಯೆಂಬ ಪವಿತ್ರ ಸ್ಥಾನವು, ಮತ್ತು ಕರ್ತವ್ಯಕರ್ಮವೇ ನಿಮಾಜು. ಇನ್ನು ಈಗ

* ಈಸುಮಾರಿಗೆ ನಾನಕನಿಗೆ ಒಬ್ಬ ಮಗನು ಹುಟ್ಟಿದನು. ಆ ಮಗುವಿಗೆ ಅವನು ಶ್ರೀಚಂದನೆಂಬ ಹೆಸರನ್ನಿಟ್ಟನು.

ಸರಿಯಾದ ಹಿಂದೂಗೃಹಸ್ಥರಾದರೂ ಇದ್ದಂತೆ ತೋರುವದಿಲ್ಲ. ಈಗಿದ್ದವರೆಲ್ಲ ತಿಳಿಗೇಡಿಗಳೇ ಕಾಣುತ್ತಾರೆ. ಏಕೆಂದರೆ ಅವರು ಪೂಜಿಸುವ ಮೂರ್ತಿಗಳು ನೀರೊಳಗೆ ಮುಳುಗುತ್ತವೆ. ಇಂತಹ ಮೂರ್ತಿಗಳು ಅವರನ್ನು ಸಂಸಾರಸಮುದ್ರದಿಂದ ಹೇಗೆ ತೇಲಿಸಿಯಾವು? ದುರ್ವಿಚಾರಗಳನ್ನು ಬಿಟ್ಟು, ಅಂತಃಕರಣವನ್ನು ಶುದ್ಧಮಾಡಿಕೊಂಡು, ದೇವರಲ್ಲಿ ಭಕ್ತಿಯನ್ನಿಟ್ಟವರು ಮಾತ್ರ ಯೋಗ್ಯರು. ಉಳಿದವರೆಲ್ಲ ಸುಳ್ಳುಗಾರರೇ ಸರಿ."

ಈಮೇರೆಗೆ ನಾನಕನು ಹೇಳಿದ್ದನ್ನು ಕೇಳಿ, ಕಡಮೆತರದ ಹಿಂದೂಮುಸಲ್ಮಾನರು ಸಿಟ್ಟಿಗೆದ್ದು, ಅವನ ವಿರುದ್ಧವಾಗಿ ಇಲ್ಲದ್ದೊಂದು ಚಾಡಿಯನ್ನು ನವಾಬನಿಗೆ ಹೇಳಿದರು. ಆಗ ನವಾಬನು ಜಯರಾಮನ ಮುಖಾಂತರವಾಗಿ ನಾನಕನನ್ನು ಕರಿಸಿ, ಅವನಿಗೆ ಅಂಗಡಿಯ ಲೆಕ್ಕವನ್ನು ಒಪ್ಪಿಸಲಿಕ್ಕೆ ಹೇಳಿದನು. ನಾನಕನು ಕೂಡಲೆ ಬಂದು ಲೆಕ್ಕವನ್ನು ಒಪ್ಪಿಸಲು, ನವಾಬನಿಂದ ಅವನಿಗೆ ೭೬೦ ರೂಪಾಯಿಗಳು ಬರತಕ್ಕದ್ದಾದವು !! ಆದ್ದರಿಂದ ನವಾಬನ ಸಂಶಯವು ದೂರಾಯಿತು.

ನಾನಕನು ಹೀಗೆ ಮನೆಮಾರು-ಬಿಟ್ಟು ಬೈರಾಗಿಯಾದಾಗ ನಾನಕನ ಹೆಂಡತಿಯು ತುಂಬ ಬಸುರಿದ್ದಳು. ಮುಂದೆ ಕೆಲದಿವಸಗಳಮೇಲೆ ಆಕೆಯು ಗಂಡಸುಮಗನನ್ನು ಹೆತ್ತಳು. ಆದ್ದರಿಂದ ಆಗ ಆಕೆಯ ತಾಪತ್ರಯವು ಹೇಳಲಾರದಷ್ಟಾಯಿತು. ಈಸುದ್ದಿಯನ್ನು ಕೇಳಿ ಆಕೆಯ ತಂದೆಯು ಅಲ್ಲಿಗೆ ಬಂದು ನಾನಕನಿಗೆ ಪರಿಪರಿಯಿಂದ ಹೇಳಿಕೊಂಡರೂ ಅವನು ತನ್ನ ಮಾತಿಗೆ ಕಿವಿಗೊಡದ್ದನ್ನು ಕಂಡು, ಬಹುವ್ಯಸನಬಟ್ಟು, ನವಾಬನ ಕಡೆಗೆ ಹೋಗಿ, ತನ್ನ ಅಳಿಯನಿಗೆ ಬರತಕ್ಕ ಹಣವನ್ನು ತನ್ನ ಮಗಳಿಗೆ ಕೊಡಬೇಕೆಂದು ಅಂಗಲಾಚಿ ಬೇಡಿಕೊಂಡನು. ಆಗ ನವಾಬನು ಕನಿಕರಬಟ್ಟು, ನಾನಕನ ಒಪ್ಪಿಗೆ-ಕೇಳುವ ಉದ್ದೇಶದಿಂದ ಅವನನ್ನು ಕರೆಕಳುಹಲು, ನಾನಕನು—ನಾನು ಈಗ ನವಾಬನ ಊಳಿಗದಲ್ಲಿಲ್ಲ; ದೇವರ ಊಳಿಗದಲ್ಲಿರುತ್ತೇನೆ; ಆದ್ದರಿಂದ ನಾನು ಬರುವದಿಲ್ಲ, ಎಂದು ಬದಲು ಹೇಳಿ ಕಳುಹಿದನು. ಅದಕ್ಕೆ ನವಾಬನು ಯುಕ್ತಿಯಿಂದ ದೇವರ ಊಳಿಗಕ್ಕೆ ಬರಬೇಕೆಂದು ನಾನಕನನ್ನು ಕರೆಕಳುಹಲು, ಅವನು ಸಂತೋಷದಿಂದ ನವಾಬನಿದ್ದೆಡೆಗೆ ಬಂದನು. ಆಗ ನವಾಬ—

ನಾನಕನೇ, ಮೊದಲು ನೀನು ದೇವರ ಊಳಿಗವನ್ನು ಕಯ್ಕೊಂಡಿ ದ್ದೇನೆಂದು ಹೇಳಿಕಳುಹಿದೆ, ಆದ್ದರಿಂದ ಈಗ ಮಸೀದೆಗೆ ಹೋಗಿ, ದೇವರ ಸೇವೆಯನ್ನು ಮಾಡೋಣ ನಡೆ, ಎಂದು ಕೇಳಲು, ಅವನು ಅದಕ್ಕೊಡಂಬಟ್ಟು ನವಾಬ, ಕಾಜಿ ಮುಂತಾದವರೊಡನೆ ಮಸೀದೆಗೆ ಹೊರಟನು.

ಧರ್ಮವು ಹಿಂದೂ ಜನರ ಸರ್ವಸ್ವವೆಂಬದು ಇತಿಹಾಸಪ್ರಸಿದ್ಧವಾದ ಮಾತೇ ಸರಿ. ಆದ್ದರಿಂದ ಈಸುದ್ದಿಯು ಊರಲ್ಲಿ ಹಬ್ಬಿದ ಕೂಡಲೆ ಹಿಂದೂ ಜನರಲ್ಲೆಲ್ಲ ಹಾಹಾಕಾರವಾಯಿತು. ಎಲ್ಲ ಜನರು ನಾನಕನು ಮುಸಲ್ಮಾನನಾಗುವನೆಂದೆಣಿಸಿ ಹಳಹಳಿಸಲಾರಂಭಿಸಿದರು. ಜಯರಾಮನು ಧೈರ್ಯಬಿಟ್ಟನು. ಆದರೆ ಅವನ ಹೆಂಡತಿಯಾದ ನಾನಕಿಯು ಈಮಾತಿಗೆ ಎಳ್ಳಷ್ಟಾದರೂ ಒಡಂಬಡಲಿಲ್ಲ. ಆಕೆಯು ಅಂದುದೇನಂದರೆ:-ನಾನಕನು ಸಾಮಾನ್ಯಮನುಷ್ಯನಲ್ಲ. ಅವನು ಮಹಾಪುರುಷನಿರುತ್ತಾನೆ. ಆದ್ದರಿಂದ ಅವನೆಂದಿಗೂ ಮುಸಲ್ಮಾನನಾಗನು. ಅವನು ಮುಸಲ್ಮಾನರನ್ನು ಬಾರಿಬಾರಿಗೆ ದೂಷಿಸುವದನ್ನು ನೀವು ಕೇಳಿಲ್ಲವೇ? ಅವನು ನವಾಬ-ಕಾಜಿಗಳೊಡನೆ ಮಸೀದೆಗೆ ಹೋದ್ದರಿಂದಲೇ ಅವನು ಮುಸಲ್ಮಾನನಾಗುವನೆಂದು ಅನುಮಾನಮಾಡಕೂಡದು. ಅಲ್ಲಿ ಬಹುಶಃ ಏನಾದರೊಂದು ಸೋಜಿಗದ ಸಂಗತಿಯು ಒದಗ ಬಹುದು. ಆದ್ದರಿಂದ ಕೆಲವರು ಮಸೀದೆಗೆ ಹೋಗಿ, ಅಲ್ಲಿ ಏನು ನಡೆಯುತ್ತದೆಂಬದನ್ನು ನೋಡಿ ಬನ್ನಿರಿ

ಆಕೆಯು ಹೇಳಿದಂತೆ ಕೆಲವರು ಮಸೀದೆಗೆ ಹೋಗಿ ನೋಡಲು, ನವಾಬ-ಕಾಜಿಗಳು ನಿಮಾಜು ಮಾಡುತ್ತಾರೆ ಮತ್ತು ನಾನಕನು ಅವರಿಂದ ದೂರವಾಗಿ ಒತ್ತಟ್ಟಿಗೆ ಸುಮ್ಮನೇ ನಿಂತಿರುತ್ತಾನೆ!! ನಿಮಾಜು ಮುಗಿದ ಬಳಿಕ ನವಾಬನು-ಹೀಗೇಕೆ ನಿಂತೆ; ನಮ್ಮೊಡನೆ ದೇವರ ಸ್ತುತಿಯನ್ನು ಏಕೆ ಮಾಡಲಿಲ್ಲ, ಎಂದು ಕೇಳಲು, ನಾನಕನು-ನೀವು ನನ್ನನ್ನು ದೇವರ ಸೇವೆಗೆ ಕರೆದಾಗ ನಿಮ್ಮ ಮನಸ್ಸು ದೇವರಲ್ಲಿತ್ತು. ಆದ್ದರಿಂದ ನಾನು ನಿಮ್ಮೊಡನೆ ಬರಲೊಡಂಬಟ್ಟೆನು. ಆದರೆ ನೀವು ನಿಮಾಜು ಮಾಡುವಾಗ ನಿಮ್ಮ ಮನಸ್ಸು ದೇವರಲ್ಲಿರದೆ ಕಂದಹಾರದಲ್ಲಿ ಕುದುರೆಯ ಮಾರಾಟವನ್ನು ಮಾಡುತ್ತಿತ್ತು, ಮತ್ತು ಕಾಜಿಗಳು ತಮ್ಮ ಮನೆಯಲ್ಲಿರುವ ಮಕ್ಕಳ ವಿಚಾರದಲ್ಲಿ ಮುಳುಗಿದ್ದರು. ಆದ್ದರಿಂದ ನಾನು ನಿಮ್ಮೊಡನೆ ದೇವರ ಧ್ಯಾನವನ್ನು ಮಾಡಲಿಲ್ಲ, ಎಂದು ಸ್ಪಷ್ಟವಾಗಿ ಹೇಳಿದನು!!

ಈಮುವರ್ತೋದ್ಘಾಟನದ ಮಾತನ್ನು ಕೇಳಿ, ಎಲ್ಲರೂ ಅಚ್ಚರಿಗೊಂಡರು. ನವಾಬನಂತೂ ನಾನಕನು ದೇವದೂತನೆಂದು ತಿಳುಕೊಂಡನು. ಕಾಜಿಯು ಮಾತ್ರ ಸುಳ್ಳು ನೆವನ ಹೇಳಲಾರಂಭಿಸಿದನು. ಆಗ ನವಾಬನು ಕಾಜಿಯು ಮೋರೆಯ ಲಕ್ಷಣದಿಂದಲೇ ಅವನು ಸಟೆಯಾಡುತ್ತಾನೆಂದು ತರ್ಕಿಸಿ, ನಾನಕನಿಗೆ ಸನ್ಮಾನಮಾಡಿ, ಅವನಪ್ಪಣೆಯಂತೆ ತಾನು ಕೊಡತಕ್ಕ ೭೬೦ ರೂಪಾಯಿಗಳಲ್ಲಿ ಅರ್ಧ ಹಣವನ್ನು ಅವನ ಹೆಂಡತಿಗೆ ಕೊಟ್ಟು, ಉಳಿದ ಅರ್ಧಹಣವನ್ನು ಬಡಬಗ್ಗರಿಗೆ ಹಂಚಿಕೊಟ್ಟನು. ಬಳಿಕ ನಾನಕನ ಹೆಂಡತಿಯಾದ ಶಿರೋಲೇಖನೆಯು ತನ್ನ ಹಿರಿಯ ಮಗನನ್ನು ಜಯರಾಮನ ಬಳಿಯಲ್ಲಿಟ್ಟು, ಚಿಕ್ಕಮಗುವಿನೊಡನೆ ತನ್ನ ತವರ್ಮನೆಗೆ ಹೊರಟು ಹೋದಳು.

ಈಕಾಲಕ್ಕೆ ಸುಲ್ತಾನಪುರದಲ್ಲಿ ನಡೆದ ಈಗದ್ದಲದ ಹಾರಸುದ್ದಿಯು ಕಾಳುವಿಗೆ ಹತ್ತಿದ್ದರಿಂದ, ಅವನು ನಿಜವಾದ ಸಂಗತಿಯನ್ನು ಅರಿತುಕೊಳ್ಳುವ ಉದ್ದೇಶದಿಂದ ತನ್ನ ಆಳಾದ ಮರ್ದಾನನನ್ನು ಅಲ್ಲಿಗೆ ಕಳುಹಿದನು. ಅವನು ನಾನಕನಿದ್ದೆಡೆಗೆ ಬರಲು ನಾನಕನು ಸಂತೋಷಬಟ್ಟು, ಅವನನ್ನು ತನ್ನ ಬಳಿಯಲ್ಲೇ ಇಟ್ಟುಕೊಂಡನು. ಮುಂದೆ ಕೆಲಕಾಲ ಹೋದಬಳಿಕ ತಾಲ್ಬಂದಿಯ ಮುಪ್ಪಿನ ಜಮೇದಾರನು ನಾನಕನ ಕೀರ್ತಿಯನ್ನು ಕೇಳಿ, ಅವನನ್ನು ತನ್ನ ಊರಿಗೆ ಆದರದಿಂದ ಕರೆಕಳುಹಿದನು. ಆಗ ನಾನಕನು ಆಜಮೇದಾರನ ಆಗ್ರಹಕ್ಕೊಳಪಟ್ಟೋ ತನ್ನ ತಾಯಿತಂದೆಗಳನ್ನು ಕಾಣುವ ಲವಲವಿಕೆಯಿಂದಲೋ ತಾಲ್ಬಂದಿಗೆ ಬಂದು, ಅಲ್ಲಿ ಕೆಲದಿವಸ ನಿಂತು ತಾಯಿತಂದೆಗಳನ್ನೂ ಆಪ್ತೇಷ್ಟರನ್ನೂ ಸಂತವಿಸಿ, ಆಜಮೇದಾರನಿಗೆ ಪರೋಪಕಾರಾರ್ಥವಾಗಿ ಒಂದು ಕೆರೆಯನ್ನು ಕಡಿಸಲಿಕ್ಕೆ ಹೇಳಿ,† ತಾನು ಮರ್ದಾನನೊಡನೆ ವಿಪಶು ನದಿಯ ದಂಡೆಗೆ ಹೋಗಿ, ಅಲ್ಲಿ ದೇವರ ಧ್ಯಾನಮಾಡುತ್ತಾ ಕುಳಿತನು. ಅವನು ಬಂದ ಸುದ್ದಿಯನ್ನು ಕೇಳಿ, ನೆರೆಹಳ್ಳಿಗಳ ಜನರು ಗುಂಪುಗುಂಪಾಗಿ ಅವನ ದರುಶನಕ್ಕೆ ಬಂದರು. ನಾನಕನು ಅವರೆಲ್ಲರಿಗೂ ಉಪದೇಶಮಾಡಲು, ಅವರು ಸಂತುಷ್ಟರಾಗಿ ಅವನಿದ್ದಲ್ಲಿ ಕರ್ತೃಪುರವೆಂಬೊಂದು ಊರನ್ನು ಕಟ್ಟಿಸಲಿಕ್ಕೆ ಅಪ್ಪಣೆಯನ್ನು ಬೇಡಿಕೊಂಡರು. ಆಗ ನಾನಕ

† ಈಕೆರೆಗೆ ಗುರು-ನಾನಕನ ಕೆರೆಯೆಂದು ಈಗಲೂ ಕರೆಯುತ್ತಾರೆ.

ನು ಆಸ್ಥಳದ ರಮಣೀಯತ್ವಕ್ಕೆ ಮೆಚ್ಚಿ, ಅವನು ಕೇಳಿದ ಅಪ್ಪಣೆಯನ್ನು ಕೊಟ್ಟನು. ಅಲ್ಲಿ ಊರಾದಕೂಡಲೆ ನಾನಕನ ತಾಯಿತಂದೆಗಳೂ ಹೆಂಡತಿಮಕ್ಕಳೂ ಅಲ್ಲಿಗೆ ಬಂದು ಇರಲಾರಂಭಿಸಿದರು.† ಮುಂದೆ ನಾನಕನು ಕೆಲದಿವಸ ಅವರೊಡನೆ ಅಲ್ಲೇ ಇದ್ದು ಅವರಿಗೆ ಉಪದೇಶಮಾಡಿ, ಉತ್ತರಹಿಂದುಸ್ಥಾನದ ಎಲ್ಲ ಜನರಿಗೆ ಉಪದೇಶಮಾಡುವ ಉದ್ದೇಶದಿಂದ ಮರ್ದಾನ-ಬಾಳು ಎಂಬ ತನ್ನಿಬ್ಬರು ಶಿಷ್ಯರೊಡನೆ ಅಲ್ಲಿಂದ ಹೊರಟನು.*

ನಾನಕನು ಉಪದೇಶಮಾಡುತ್ತಾ ಊರಿಂದೂರಿಗೆ ಹೋಗುವಾಗ ಒಂದು ಸ್ಥಳದಲ್ಲಿ ಕೆಲ ಸಾಧುಗಳು ಯೋಗಾಭ್ಯಾಸಮಾಡುವದನ್ನು ಕಂಡನು. ಅವನು ಅವರ ಬಳಿಗೆ ಹೋಗಲು, ಅವರೊಳಗೊಬ್ಬನಾದ ಭರ್ತೃಹರಿಯೆಂಬ ಬ್ರಾಹ್ಮಣನು ಅವನಿಗೆ ನಮಸ್ಕರಿಸಿ ಬಿನ್ನವಿಸಿದ್ದೇನಂದರೆ:–ನಾನು ಈಗ ೩।ಲ ವರುಷ ಯೋಗಾಭ್ಯಾಸವನ್ನು ಮಾಡುತ್ತಲಿದ್ದೇನೆ, ಮತ್ತು ಮನಸ್ಸು ಏಕಾಗ್ರಚಿತ್ತವಾಗಬೇಕೆಂಬ ಉದ್ದೇಶದಿಂದ ಸರಾಯಿಯನ್ನು ಕುಡಿಯುತ್ತೇನೆ. ಆದರೆ ಏನುಮಾಡಿದರೂ ನನ್ನ ಮನಸ್ಸಿಗೆ ಸ್ವಾಸ್ಥ್ಯವು ದೊರೆಯಲೊಲ್ಲದು. ಆದ್ದರಿಂದ ಸಾಧುಗಳೇ ತಾವಾದರೂ ಏನಾದರೊಂದು ಉಪಾಯವನ್ನು ದಯಮಾಡಿ ಹೇಳಿರಿ. ಆಗ ನಾನಕನು ಅವನಿಗೆ ಹೇಳಿದ್ದೇನಂದರೆ:–ಭಕ್ತಿಯಿಲ್ಲದ ಯೋಗಾಭ್ಯಾಸದಿಂದ ಏನೂ ಫಲವಾಗುವದಿಲ್ಲ. ಆದ್ದರಿಂದ ತಾವು ಹರನಲ್ಲಿ ವಿಶ್ವಾಸವಿಟ್ಟು, ಅವನ ನಾಮಸ್ಮರಣೆಯನ್ನು ಎಡೆಬಿಡದೆ ಮಾಡಿರಿ. ಅಂದರೆ ತಮಗೆ ಇಹದಲ್ಲಿ ಮನಶ್ಶಾಂತಿಯಾಗುವದಲ್ಲದೆ ಪರದಲ್ಲಿ ಮುಕ್ತಿ ದೊರೆಯುವದು. ಇದಲ್ಲದೆ ಸರಾಯಿಯು ನಿಷಿದ್ಧವಾದ್ದು. ಸಾಧುಗಳು ಜ್ಞಾನವೆಂಬ

---

* ಈ ಕರ್ತಾರಪುರದಲ್ಲಿರುವಾಗ ಕಾಳುವು ತನ್ನ ತಂದೆಯ ಶ್ರಾದ್ಧಕ್ಕೋಸುಗ ಒಬ್ಬ ಬ್ರಾಹ್ಮಣನನ್ನು ಕರೆಯಲು, ನಾನಕನು ಅವನಿಗೆ ಹೇಳಿದ್ದೇನಂದರೆ:–ಹುಡುಗರು ಮೇಲೆ ಹಾರಿ ಹೋದ ಪಟವನ್ನು ದೂರದಿಂದ ಕೆಳಗೆ ಜಗ್ಗುವಂತೆ, ಈ ಸಂಸಾರವನ್ನು ನೀಗಿ ಮುಕ್ತಿಹೊಂದಿದ ತಮ್ಮ ತಂದೆಯನ್ನು ಶ್ರಾದ್ಧಕರ್ಮದಿಂದ ಈ ಲೋಕಕ್ಕೆ ಎಳೆಯುವದು ಸರಿಯಲ್ಲ.

* ಈ ಕಾಲಕ್ಕೆ ದೇವರು ನಾನಕನಿಗೆ ಪ್ರತ್ಯಕ್ಷನಾಗಿ ಜನರಿಗೆ ಉಪದೇಶಮಾಡಲಿಕ್ಕೆ ಹೇಳಿದನೆಂದು ಸಿಕ್ಕರು ನಂಬುತ್ತಾರೆ.

ಸಕ್ಕರೆಯನ್ನೂ ವಿಚಾರವೆಂಬ ಹೂವನ್ನೂ ಸತ್ಕೃತ್ಯವೆಂಬ ನೀರಿನಲ್ಲಿ ಕೂಡಿಸಿ, ಅಮೃತತುಲ್ಯವಾದ ಅದರ ಕಷಾಯವನ್ನು ಕುಡಿಯುವದೇ ತಕ್ಕುದು. ಆದ್ದರಿಂದ ತಾವು ಇನ್ನು ಮುಂದೆ ಸರಾಯಿಯನ್ನು ಕುಡಿಯ ಕೂಡದೆಂದು ನನ್ನ ಬಿನ್ನಹವಿದೆ. ಈಮಾತನ್ನು ಕೇಳಿ ಭರ್ತೃಹರಿಯು ಸಂತೋಷಬಟ್ಟು ಅದರಂತೆ ಮಾಡಲಾರಂಭಿಸಿದನು.

ಈಕಾಲಕ್ಕೆ ಮರ್ದಾನನು ಬೇಸತ್ತು ತಿರುಗಿ ಮನೆಗೆ ಹೋಗಲಿಕ್ಕೆ ಅಪ್ಪಣೆಯನ್ನು ಕೇಳಿದನು. ನಾನಕನು ಎಷ್ಟು ಬಗೆಯಿಂದ ಹೇಳಿದರೂ ಅವನು ಕೇಳಲಿಲ್ಲ. ಆದ್ದರಿಂದ ನಾನಕನು ನಿರುಪಾಯನಾಗಿ ಅವನಿಗೆ ಅಪ್ಪಣೆಕೊಟ್ಟನು. ಮುಂದೆ ಅವನು ತಿರುಗಿ ಹೋಗುವಾಗ ಹಾದಿಯಲ್ಲಿ ಒಬ್ಬ ದುಷ್ಟನು ಅವನನ್ನು ಹಿಡಿದು ಕಾದೆಣ್ಣೆಯ ಕೊಪ್ಪರಿಗೆಯಲ್ಲಿ ಹಾಕಿದನೆಂತಲೂ ನಾನಕನ ಪ್ರಭಾವದಿಂದ ಅವನಿಗೆ ಅದರಿಂದೇನೂ ಅಪಾಯವಾಗಲಿಲ್ಲೆಂತಲೂ ಆದ್ದರಿಂದ ಮರ್ದಾನನು ಮನೆಗೆ ಹೋಗದೆ ಮರಳಿ ನಾನಕನೆಡೆಗೆ ಬಂದನೆಂತಲೂ ಶೀಕರು ಹೇಳುತ್ತಾರೆ.

ಹೀಗೆ ಹಲವು ವರುಷ ಮನೆಮನೆಗೆ ಹಿಂದೂಜನರಿಗೂ ಮುಸಲ್ಮಾನರಿಗೂ ಉಪದೇಶಮಾಡಿದ ಬಳಿಕ ನಾನಕನ ಅಂತ್ಯವು ಸಮಾಪಿಸಿತು. ಆಗಲವನು ತನ್ನ ಪ್ರಿಯಶಿಷ್ಯನಾದ ಲೋಹಿನನನ್ನು ಕರೆದು, ತನ್ನಂತೇ ಜನರಿಗೆ ಉಪದೇಶಮಾಡಲಿಕ್ಕೆ ಹೇಳಿ ಪ್ರಾಣಬಿಟ್ಟನು (೧೫೩೮). ಆಗ ಅವನಿಗೆ ೭೦ ವರುಷಗಳಾಗಿದ್ದವು. ಅವನ ಹೆಣದ ವ್ಯವಸ್ಥೆಯ ಸಂಬಂಧದಿಂದ ಹಿಂದೂ ಜನರೂ ಮುಸಲ್ಮಾನರೂ ಬಡಿದಾಡುತ್ತಿರುವಾಗ, ಆಹೆಣವು† ಅದೃಶ್ಯವಾಯಿತೆಂದು ಶೀಕರು ನಂಬುತ್ತಾರೆ.

ಶೀಕಮತ—ಗುರು-ನಾನಕನು ಹೊಸಧರ್ಮವನ್ನು ಸ್ಥಾಪಿಸಿದನೆನ್ನಕೂಡದು. ಅವನು ಚೈತನ್ಯ, ಕಬೀರ, ಬಸವ ಮುಂತಾದವರಂತೆ ಕರ್ಮಮಾರ್ಗವನ್ನು ಜರೆದು, ಜ್ಞಾನಮಾರ್ಗವು ಸಾಮಾನ್ಯಜನರಿಗೆ ಅಸಾಧ್ಯವೆಂದೆಣಿಸಿ, ಭಕ್ತಿ ಮಾರ್ಗವನ್ನು ಹಬ್ಬಿಸಲೆತ್ತುಗಡೆ ಮಾಡಿದನು. ಅವನು ಪುರಾಣದಲ್ಲಿ ಹೇಳಿದ ೩೩,೦೦,೦೦,೦೦೦ ದೇವತೆಗಳಲ್ಲಿ ವಿಶ್ವಾಸವಿಡದೆ ದೇವರು ಒಬ್ಬನೇ ಇರುತ್ತಾನೆಂದು ನೆರೆನಂಬಿದ್ದರಿಂದ ಹಿಂದೂಜನರೂ ಮುಸಲ್ಮಾನರೂ ಅವನ ಉಪದೇಶವನ್ನು ಮನಸ್ಸುಗೊಟ್ಟು ಕೇಳಿದರು, ಮತ್ತು ಎಷ್ಟೋ ಜನರು ಅವನ ಶಿಷ್ಯರಾದರು. ಅವನು ಜಾತಿಭೇದವನ್ನು

† ಹಿಂದೆ ಕಬೀರನ ಚರಿತ್ರದ ೬೦ನೆಯ ಪುಟವನ್ನು ನೋಡಿರಿ.

ಲೆಕ್ಕಿಸಲಿಲ್ಲ. ಜಾತಿಯು ಮನುಷ್ಯರ ಸಾಮಾಜಿಕವಿಭಾಗವೇ ಹೊರತು ನೈಸರ್ಗಿಕವಿಭಾಗವಲ್ಲವೆಂದು ಅವನು ಪ್ರತಿಪಾದಿಸಿದನು. ದೇವರಿಗೆ ಎಲ್ಲಜನರು ಸರಿಯಾದ್ದರಿಂದ, ಅವನು ಒಂದು ಜಾತಿಯುವರು ಹೆಚ್ಚು ಮತ್ತೊಂದು ಜಾತಿಯುವರು ಕಡಮೆಯೆಂದೆಣಿಸಿ, ಪಕ್ಷಪಾತವನ್ನು ಎಂದೂ ಮಾಡುವದಿಲ್ಲೆಂದು ಅವನು ಸಾರುತ್ತಿದ್ದನು. ದೇವರಲ್ಲಿ ಜಾತಿಯ ಪಕ್ಷಪಾತವಿಲ್ಲದಿದ್ದರೂ ಅವನು ಭಕ್ತಾಭಿಮಾನಿಯಾಗಿರುತ್ತಾನೆಂದು ನಂಬಿ, ಅನನ್ಯಭಾವದಿಂದ ದೇವರನ್ನು ಭಜಿಸುವವರಿಗೆ ಮುಕ್ತಿಯು ದೊರೆಯುತ್ತದೆಂದು ಅವನು ಬೋಧಿಸಿದನು. ಸಂಸಾರದಲ್ಲಿ ತೊಡಗಿದವರಿಗೆ ಈತರದ ಭಕ್ತಿಯು ಹುಟ್ಟಲಾರದೆಂದು ಅವನ ಅಭಿಪ್ರಾಯವಿತ್ತು. ಏಕೆಂದರೆ, ಈಸಂಸಾರದ ಕಠಿನ-ಮೋಹಪಾಶದಲ್ಲಿ ಸಿಲುಕಿ, ವಿಷಯಲಂಪಟಕ್ಕೊಳಗಾಗದೆ ದೇವರನ್ನು ಅನನ್ಯಭಾವದಿಂದ ಭಜಿಸುವದು ಬಹುಶ್ರಮದ ಕೆಲಸವೆಂದು ಅವನು ಮನಗಂಡಿದ್ದನು. ಆದ್ದರಿಂದ ಅವನು ಈಸಂಸಾರವನ್ನು ತೊಲಗಿ, ವಿಷಯೋಪಭೋಗವನ್ನು ಹೀಯಾಳಿಸಿ, ಕರ್ಮಬಂಧನಕ್ಕೊಳಗಾಗದೆ, ಶುದ್ಧಾಂತಃಕರಣದಿಂದ ದೇವರನ್ನು ಭಜಿಸುವವರಿಗೆ ಮುಕ್ತಿಯು ನಿಶ್ಚಯವಾಗಿ ದೊರೆಯುವದೆಂದು ಎಲ್ಲ ಜನರಿಗೂ ಉಪದೇಶಿಸಿದನು.

ಗುರು-ನಾನಕನು ತನ್ನ ವೈರಾಗ್ಯವೃತ್ತಿಯಿಂದಲೂ ನಿಷ್ಕಪಟಾಚರಣೆಯಿಂದಲೂ ದೇವತಾಭಕ್ತಿಯಿಂದಲೂ ಜನರನ್ನು ಮೆಚ್ಚಿಸಿ, ಅವರನ್ನು ತನ್ನ ಶಿಷ್ಯರನ್ನು ಮಾಡಿಕೊಂಡನು. ಮುಂದೆ ಕೆಲಕಾಲ ಅವನ ಸ್ಥಾನಾಪನ್ನರಾದವರು ಅದೇ ಮೇರೆಗೆ ನಡೆದುದರಿಂದ ಉತ್ತರಹಿಂದುಸ್ಥಾನದಲ್ಲೆಲ್ಲ ಶೀಕ-ಮತವು ಹಬ್ಬಿತು. ತರುವಾಯ ಮುಸಲ್ಮಾನರ ಧರ್ಮಹಿಂಸೆಯು ಹೆಚ್ಚಾದ್ದರಿಂದ ಶೀಕರು ಧರ್ಮಾಭಿಮಾನದಿಂದ ಒಟ್ಟುಗೂಡಿ, ತಮ್ಮ ಹಿಂಸಕರಾದ ಮುಸಲ್ಮಾನರೊಡನೆ ಕಾದಿ, ಅವರ ರಾಜ್ಯವು ನಷ್ಟವಾದ ಬಳಿಕ ಕಲಿಗಳೆಂದು ಹೆಸರಾದರು. ಈಸಂಗತಿಯು ಗುರು-ನಾನಕನ ಸ್ಥಾನಾಪನ್ನರ ಚರಿತ್ರಕ್ಕೆ ಸಂಬಂಧಿಸಿರುವುದರಿಂದ ಅದನ್ನು ಇಲ್ಲಿ ಹೆಚ್ಚಿಗೆ ವಿವರಿಸುವದು ಸರಿಯಾಗಲಾರದು.